# ನಮ್ಮ ಮಾನಸ

ನವೆಂಬರ್ 2012

ಸಂಪುಟ : 6 ಸಂಚಿಕೆ : 7

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 98804 67372 / 98869 18910*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*




*ಚಂದಾ ವಿವರ*

| | |
|---|---|
| ಬಿಡಿಪ್ರತಿ | 10–00 ರೂ. |
| ವಾರ್ಷಿಕ ಚಂದಾ | 100–00 ರೂ. |
| (ವಿಶೇಷ ಸಂಚಿಕೆಯೊಂದಿಗೆ) | |
| ಸಂಸ್ಥೆಗಳಿಗೆ | 150–00 ರೂ. |


## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018


*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

**ಪ್ರಾರಂಭ : 'ಮಾನವಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**

## ಒಳಗಿನ ಪುಟಗಳಲ್ಲಿ....



## ಸಹೃದಯ ಓದುಗರಲ್ಲಿ...

ನೀವು ನಮ್ಮ ಚಿಂತನೆ–ಗುರಿಯನ್ನು ಬಲಪಡಿಸುವಿರೆಂದು ನಮಗೆ ನಂಬಿಕೆ ಇದೆ. ನೀವು ಓದುತ್ತಿರುವ ಮಾನಸವನ್ನು ಹೊರತರಲು ನಿಮ್ಮ ಆರ್ಥಿಕ ನೆರವು, ಪ್ರೋತ್ಸಾಹ ಮುಖ್ಯ. ಮಾನಸವನ್ನು ಮತ್ತೊಮ್ಮೆ ನಿರಂತರವಾಗಿ ಜೀವಂತವಾಗಿಡಲು ಸಹೃದಯ ಓದುಗರ ಬೆಂಬಲದ ಅಗತ್ಯವಿದೆ. ನೀವು ಯಾವುದಾದರೊಂದು ಬಗೆಯಲ್ಲಿ ನಮ್ಮೊಂದಿಗೆ ಕೈಜೋಡಿಸಬಹುದು.

- ಪ್ರತಿ ತಿಂಗಳಿಗೊಮ್ಮೆ ಲೇಖನಗಳನ್ನು ಬರೆಯಿರಿ ಇಲ್ಲವೇ ಬೇರೆಯವರಿಂದ ಬರೆಯಿಸಿ ಕಳುಹಿಸಿ.
- ವಾರ್ಷಿಕ ಚಂದಾದಾರರಾಗಿ ಮತ್ತು ಇನ್ನಷ್ಟು ಚಂದಾದಾರರನ್ನು ಪರಿಚಯಿಸಿ.
- ಮಾನಸದ ಒಂದು ತಿಂಗಳ ಮುದ್ರಣದ ಖರ್ಚು ರೂ. 7,000/– ರಲ್ಲಿ ಪೂರ್ತಿ ಇಲ್ಲವೇ ನಿಮಗೆ ಸಾಧ್ಯವಾದಷ್ಟು ಹಣವನ್ನು ಕೊಟ್ಟು ಬೆಂಬಲಿಸಿ ಕೈ ಜೋಡಿಸುವಿರೆಂಬ ಆಶಯದೊಂದಿಗೆ,

**ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ**


E-mail: nammamanasa@gmail.com
Contact: Disha K.R.: 9880467372, Lekha: 9686757053, Samudyatha : 88922 48351, Nirmala K.: 98869 18910


ಚಿತ್ರಕೃಪೆ: ಅಂತರಜಾಲ



ಸಂಪಾದಕೀಯ

# ಮಹಿಳೆಯರ ಗೃಹಕೃತ್ಯದ ಶ್ರಮದ ಆರ್ಥಿಕತೆ ರಾಷ್ಟ್ರೀಯ ಆದಾಯಕ್ಕೆ ಕೊಡುಗೆಯಲ್ಲವೇ?

ಇತ್ತೀಚೆಗೆ ಕೃಷ್ಣ ಥಿರತ್ ಎನ್ನುವ ಮಂತ್ರಿಯೊಬ್ಬರು ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ ಕರೆದ ಪ್ರೆಸ್ ಕಾನ್‌ಫರೆನ್ಸನಲ್ಲಿ ಗಂಡನ ದುಡಿಮೆಯಲ್ಲಿನ ಸಂಬಳದ ಇಂತಿಷ್ಟು ಭಾಗ ಕುಟುಂಬದ ಎಲ್ಲ ಕೆಲಸ ನಿರ್ವಹಿಸುವ ಹೆಂಡತಿಯ ಬ್ಯಾಂಕ್ ಅಕೌಂಟ್‌ಗೆ ಸಂಬಳದ ರೂಪದಲ್ಲಿ ಖಡ್ಡಾಯವಾಗಿ ಹೋಗಲೇ ಬೇಕೆನ್ನುವ ಒಂದು ಮಸೂದೆ ತರಬೇಕೆಂಬ ಸಲಹೆಯನ್ನು ಇತ್ತಿದ್ದಾರೆ. ಹೆಂಡತಿಯ ಅಕೌಂಟ್‌ಗೆ ಹೋಗುವ ಹಣಕ್ಕೆ ಆದಾಯ ತೆರಿಗೆಯ ರಿಯಾಯಿತಿ ಇರಬೇಕು. ಆಗ ಆಕೆಗೆ ಕುಟುಂಬ ನಡೆಸುವುದಕ್ಕೆ ಬೇಕಾದ ಆದಾಯ ಇರುವುದಲ್ಲದೇ, ಆಕೆ ಸ್ವತಂತ್ರವಾಗಿ ತನ್ನ ಬೇಕು ಬೇಡಗಳನ್ನೂ ಕೂಡಾ ನೋಡಿಕೊಳ್ಳಬಹುದಾಗಿದೆ ಎಂಬುದು ಅವರ ಅಭಿಪ್ರಾಯ. ನಂತರ ಸಂಬಳ ಎನ್ನುವ ಬದಲು ಈ ರೀತಿಯ ಆದಾಯವನ್ನು ಗೌರವಧನ ಎಂದು ಕರೆಯಬಹುದಾಗಿದೆ ಎಂದೂ ಕೂಡ ಕೃಷ್ಣ ಥಿರತ್ ಅಭಿಪ್ರಾಯ ಪಡುತ್ತಾರೆ. ಹೆಂಡತಿ ಈಗ ಬಿಟ್ಟಿಯಾಗಿ ಎಲ್ಲ ಕೆಲಸಗಳನ್ನು ಮಾಡುತ್ತಿದ್ದಾಳೆ. ಒಂದು ಪಕ್ಷ ಆಕೆ ಮಾಡದಿದ್ದರೆ, ಈ ಎಲ್ಲ ಕೆಲಸಗಳಿಗೂ ಹಣ ತೆತ್ತೇ ಸೇವೆಯ ಸೌಲಭ್ಯ ಪಡೆದುಕೊಳ್ಳಬೇಕಾಗುತ್ತದೆ. ಹಾಗಾಗಿ ಆಕೆಗೆ ಗೌರವಧನ ಎಂದು ನೀಡಬೇಕಾಗುತ್ತದೆ ಎಂಬುದು ಅವರ ಮಾತಿನ ಒಟ್ಟು ತಾತ್ಪರ್ಯ. ತಿಂಗಳಿಗೆ ಹದಿನೇಳು ಅತ್ಯಾಚಾರ. ಹೆಚ್ಚಾಗಿ ದಲಿತ ಹುಡುಗಿಯರ ಮೇಲೆಯೇ ಹರಿಯಾಣದಲ್ಲಿ ಆಗುತ್ತದೆ ಎಂಬ ಪ್ರಶ್ನೆಗೆ ಮದುವೆ ಬೇಗ ಮಾಡಿಬಿಡಿ ಎನ್ನುವ ಮಂತ್ರಿಮಹೋದಯರು ಒಂದು ಕಡೆಯಾದರೆ, ಪತ್ನಿಯರು ಕಾಲಕ್ರಮೇಣ ತಮ್ಮ ಚಾರ್ಮಕಳೆದುಕೊಳ್ಳುತ್ತಾರೆ ಎನ್ನುವ ಮಹಾಶಯರು ಇನ್ನೊಂದು ಕಡೆಗೆ. ಹೆಣ್ಣನ್ನು ಲೇವಡಿ ರೂಪದಲ್ಲಿ, ಪಿತೃಪ್ರಧಾನತೆಯ ಹಿಡಿತದಲ್ಲಿಯೇ ಹಗುರವಾಗಿ ಪ್ರತಿಬಿಂಬಿಸುವ ಮಂತ್ರಿ ಮಹಾಶಯರು ನಮ್ಮ ನಾಡಿನ ರಾಜಕೀಯದಲ್ಲಿ ತುಂಬಿ ತುಳುಕುತ್ತಿರುವಾಗ, ಕುಟುಂಬದಲ್ಲಿ ಮಹಿಳೆ ಮಾಡುವ ಸೇವೆಯನ್ನು ಗುರುತಿಸುವ ಗಂಭೀರವಾದ ಪ್ರಯತ್ನವನ್ನು ಕೃಷ್ಣ ಥಿರತ್ ಮಾಡಿದ್ದಾರೆ ಎಂದು ಹೇಳಬಹುದಾದರೂ, ಮನೆಗೆಲಸದ ಶ್ರಮದ ಬಗೆಗೆ ಇವರ ಮೇಲು ಹರವಿನ ತಿಳುವಳಿಕೆಯನ್ನು ನಾವು ಪ್ರಶ್ನಿಸಬೇಕಾಗುತ್ತದೆ.

60ರ ದಶಕದಿಂದಲೂ ಮನೆಗೆಲಸದ ಶ್ರಮದ ಬಗ್ಗೆ ಮಹಿಳಾ ಚಳುವಳಿಯಲ್ಲಿ ಚರ್ಚೆಗಳು ನಡೆಯುತ್ತಲೇ ಇವೆ. ಮಹಿಳೆಯ ಈ ಶ್ರಮವನ್ನು ಮರು ಉತ್ಪಾದನೆಯಲ್ಲಿ ಗುರುತಿಸುವ ಕೆಲಸವನ್ನು ಮಹಿಳಾ ಗುಂಪುಗಳು ಮಾಡುತ್ತಲೇ ಬಂದಿವೆ. ಮಹಿಳೆ ಮನೆಗೆಲಸದ ಶ್ರಮದ ಮೂಲಕ ರಾಷ್ಟ್ರೀಯ ಆರ್ಥಿಕತೆಗೆ ಗಣನೀಯವಾದ ಕೊಡುಗೆಯನ್ನು ಸಲ್ಲಿಸುತ್ತಿದ್ದರೂ ಕೂಡಾ ಇದನ್ನು ಆರ್ಥಿಕ ಕೊಡುಗೆಯ ಭಾಗವಾಗಿ ಪರಿಗಣಿಸುವುದಿರಲಿ, ಅದನ್ನು ಕೆಲಸ, ಅಥವ ಶ್ರಮ ಎಂದು ಭಾವಿಸುವ, ಶ್ರಮಕ್ಕೆ ಆರ್ಥಿಕ ಮೌಲ್ಯವಿದೆ ಎಂದು ಅರ್ಥೈಸುವ ರ್‍ಯಾಡಿಕಲ್ ತಿಳುವಳಿಕೆಗಳು ನಮ್ಮ ಪ್ರಭುತ್ವಗಳಿಗಾಗಲೀ, ಸರ್ಕಾರಗಳಿಗಾಗಲೀ ಇಲ್ಲವೇ ಇಲ್ಲ. ಈಗಿನ ಬಂಡವಾಳಶಾಹಿಗಳಿಗೆ ಹೆಚ್ಚಿನ ಲಾಭ ಪಡೆಯಲು ಇಂತಹ ಪಿತೃಪ್ರಧಾನ ಮೌಲ್ಯಗಳೇ ಆಧಾರಸ್ತಂಭಗಳಾಗತೊಡಗಿವೆ. ಉತ್ಪಾದನೆಯನ್ನು ಬಿಡಿ ಬಿಡಿಯಾಗಿ ವಿಂಗಡಿಸಿ, ಮನೆಯಲ್ಲಿಯೇ ಕುಳಿತು, ಬಿಡಿ ಭಾಗಗಳನ್ನು ತಯಾರಿಸಿ ಮಧ್ಯವರ್ತಿಯ ಮೂಲಕ ಕಂಪನಿಗೆ, ಮಾರುಕಟ್ಟೆಗೆ ತಲುಪಿಸುವ ಕನಿಷ್ಠ ಕೂಲಿಯ, ಅಗ್ಗದ ಶ್ರಮಶಕ್ತಿಯಾಗಿ ಮಹಿಳೆಯರು ರೂಪುಗೊಂಡಿದ್ದಾರೆ. ಈ ಪ್ರಕ್ರಿಯೆ ಸಂಘಟಿತ ಹಾಗೂ ಅಸಂಘಟಿತ ಎರಡೂ ವಲಯಗಳಲ್ಲಿ ನಡೆಯುತ್ತಿರುವುದನ್ನು ನಾವು ಗಮನಿಸಬಹುದಾಗಿದೆ. ಈ ಹಂತದಲ್ಲಿ ಮಹಿಳೆಯ ಮನೆಗೆಲಸದ ಶ್ರಮ ಕಣ್ಣಿಗೇ ಕಾಣಿಸದ ರೀತಿಯಲ್ಲಿ ಮಾರ್ಪಾಡಾಗುತ್ತಿರುವುದು ಆಕೆಯನ್ನು ಇನ್ನಷ್ಟು ಶೋಚನೀಯ ಸ್ಥಿತಿಗೆ ತಳ್ಳುತ್ತಿರುವುದಲ್ಲದೇ, ಆಕೆಯ ಆರೋಗ್ಯದ ಮೇಲೆ ಮಾರಕವಾದ ಪರಿಣಾಮವನ್ನು ಬೀರುತ್ತಿದೆ. ಮಹಿಳಾ ಚಳುವಳಿ ಕುಟುಂಬದ ಆರೈಕೆ, ಮನೆಗೆಲಸದ ಶ್ರಮದ ಹಿಂದೆ ಇರುವ ಆರ್ಥಿಕ ಮೌಲ್ಯದ ಬಗ್ಗೆ, ರಾಷ್ಟ್ರೀಯ ಆದಾಯದ ಬಗ್ಗೆ, ಮಹಿಳೆಯರ ಕೊಡುಗೆಯ ಬಗ್ಗೆ ಸದಾ ಪ್ರಶ್ನಿಸುತ್ತಲೇ ಬಂದಿರುವಾಗಲೂ ಭಾರತ ಸರ್ಕಾರವಾಗಲೀ ಅಥವಾ ಪ್ರಭುತ್ವವಾಗಲೀ ಈ ಬಗ್ಗೆ ತಲೆ ಕೆಡಿಸಿಕೊಳ್ಳುವ ರಾಜಕೀಯ ಇಚ್ಛಾಶಕ್ತಿಯನ್ನೇ ಹೊಂದಿಲ್ಲ.

ಕೃಷ್ಣ ಥಿರತ್‌ರವರ ಸಲಹೆಯನ್ನು ಈ ಹಿನ್ನಲೆಯಲ್ಲಿ ನಾವು ಅರ್ಥೈಸಿಕೊಳ್ಳಬೇಕಾಗುತ್ತದೆ. ಮೊದಲನೆಯದಾಗಿ ಪ್ರಭುತ್ವ ಅಥವಾ ಸರ್ಕಾರದ ಜವಾಬ್ದಾರಿಯನ್ನು ಇಲ್ಲಿ ಕುಟುಂಬದ ಮೇಲೆಯೇ ಹೇರಲಾಗುತ್ತಿದೆ. ಕುಟುಂಬದ ಸೌಕರ್ಯಗಳನ್ನು, ಸೇವೆಗಳನ್ನು ಮಾರುಕಟ್ಟೆಯಲ್ಲಿ ಕೊಳ್ಳಬಯಸಿದರೆ ಅದಕ್ಕೆ ತಗಲುವ ವೆಚ್ಚವನ್ನು ಸರ್ಕಾರ ಸಂಬಳದಲ್ಲಿ ಸೇರಿಸಿ ಕೊಡಬೇಕಾಗುತ್ತದೆ. ಆದರೆ ಇದನ್ನು ಗಣನೆಗೇ ತೆಗೆದುಕೊಳ್ಳದ ಸರ್ಕಾರ ಸಂಬಳವನ್ನು ಕಡಿಮೆ ಮಟ್ಟದಲ್ಲಿಯೇ ಇಟ್ಟಿರುತ್ತದೆ. ಹಾಗಾಗಿ ಮನೆಗೆಲಸವನ್ನು ಮೌಲ್ಯರಹಿತ ಎಂದು ಪರಿಗಣಿಸುವುದು ಬಂಡವಾಳಶಾಹಿಗಳಿಗೆ ಲಾಭದ ಅಂಶವಾಗಿದೆ. ಗಂಡನ ಸಂಬಳದಿಂದ

ಹೆಂಡತಿಗೆ ಗೌರವಧನ ರವಾನಿಸುವುದು ಕುಟುಂಬದ ಆದಾಯದ ಮೂಲವನ್ನೇನೂ ಹೆಚ್ಚಿಸುವುದಿಲ್ಲ. ವಾಸ್ತವಿಕವಾಗಿ ಇದನ್ನು ಜಾರಿಗೆ ತರುವುದೂ ಕಷ್ಟಸಾಧ್ಯ.

ಗೌರವಧನ ಎಂದು ಕರೆಯುವ ಹಿನ್ನಲೆಯಲ್ಲಿ ಕೂಡಾ ಇರುವ ಪಿತೃಪ್ರಧಾನತೆಯ ಅಂಶವನ್ನು ನಾವು ಗಮನಿಸಬೇಕು. ಇಲ್ಲಿ ಹಕ್ಕಿನ ಪ್ರಶ್ನೆ ಇಲ್ಲ. ಕುಟುಂಬದ ಜವಾಬ್ದಾರಿ ಗುರುತರವಾದುದು ಎಂದು ಹೇಳುವ ಧ್ವನಿಯೂ ಇಲ್ಲ. ಮನೆಗೆಲಸಗಳು ಸಾಯುವವರೆಗೂ ಇರುವಂತಹವೇ. ಇವುಗಳಿಂದ ಬಿಡುಗಡೆ ಇಲ್ಲ. ಆದರೆ ಗೌರವಧನ ಎನ್ನುವ ಮೂಲಕ ಕೆಲಸ ಖಾಯಂ ಅಲ್ಲದ ಶ್ರಮಿಕರಿಗೆ ಖಾಯಂ ಮಾಡದೇ ಇರುವುದಕ್ಕಾಗಿ, ಸಂಬಳ ಹೆಚ್ಚಿಸದೇ ಇರುವುದಕ್ಕಾಗಿ ಸರ್ಕಾರ, ಪ್ರಭುತ್ವ ಬಳಸುವ ಹುನ್ನಾರ, ಭಾಷೆಯನ್ನು ಬಳಸಿ, ಗೃಹಕೃತ್ಯ, ಕುಟುಂಬದ ಸೌಕರ್ಯಗಳಿಗೇ ತಮ್ಮನ್ನು ತೊಡಗಿಸಿಕೊಂಡ ಮಹಿಳೆಯರಿಗೆ ತಾತ್ಕಾಲಿಕ ಕೆಲಸಗಾರರ ಸ್ಟೇಟಸ್‌ನ್ನು ನೀಡಿರುವ ಪ್ರಯತ್ನವನ್ನು ನಾವು ಇಲ್ಲಿ ಕಾಣಬಹುದಾಗಿದೆ.

ಹೆಂಡತಿ ಸ್ವತಂತ್ರವಾಗಿ ನಿರ್ಧರಿಸುವ, ಖರ್ಚುವೆಚ್ಚ ತೂಗಿಸುವುದಕ್ಕಾಗಿ ಗಂಡನ ಮರ್ಜಿಯನ್ನೇ ಇಲ್ಲಿಯೂ ಕಾಯಬೇಕಾಗುತ್ತದೆ. ಇದಕ್ಕಿಂತ ಹೆಚ್ಚಾಗಿ ಮಹಿಳೆಯನ್ನು ಮನೆಯ ಕೆಲಸಗಳ ಬಂಧನಗಳಿಂದ ಮುಕ್ತ ಮಾಡುವ ಬಗೆಯನ್ನು ಸರ್ಕಾರ ಯೋಚಿಸಬೇಕಾಗುತ್ತದೆ. ಕುಟುಂಬ ಖಾಸಗಿ ವಲಯ ಎಂಬ ಕಲ್ಪನೆಯನ್ನು ಬಿತ್ತುವ ಬದಲು ಕುಟುಂಬದ ಕೆಲಸಗಳ ಆರ್ಥಿಕ ಹಾಗೂ ಸಾಮಾಜಿಕ ಕೊಡುಗೆಗಳನ್ನು ಗುರುತಿಸುವ ಪ್ರಯತ್ನ ಮಾಡಬೇಕಾಗುತ್ತದೆ. ಗಂಡನ ಆದಾಯವನ್ನು ಹಂಚುವಿಕೆ ಮಾಡುವ ಬದಲು, ರಾಷ್ಟ್ರೀಯ ಆದಾಯವನ್ನು ಮರುಹಂಚಿಕೆ ಮಾಡುವ ಪ್ರಯತ್ನದಲ್ಲಿ ಮಹಿಳೆಯರು ಉತ್ಪಾದನೆಯಲ್ಲಿ ನೇರವಾಗಿ ಭಾಗಿಯಾಗುವಂತೆ ಮಾಡುವುದು, ಭಿನ್ನ ಸಾಮಾಜೀಕರಣಕ್ಕೆ ಮಹಿಳೆಯರು ತೆರೆದುಕೊಳ್ಳುವಂತೆ ಮಾಡಲು ಸರ್ಕಾರ ಅವರಿಗೆ ಉದ್ಯೋಗದ ಅವಕಾಶಗಳನ್ನು ಹೆಚ್ಚಿಸುವುದು ಅಗತ್ಯವಾಗುತ್ತದೆ. ಕುಟುಂಬಕ್ಕೆ ಅನುಕೂಲವಾಗುವಂತೆ ಕಡಿಮೆ ದರದಲ್ಲಿ ಮಕ್ಕಳ ಕ್ರೆಷ್ ಸೌಲಭ್ಯ, ಆರೋಗ್ಯ ಸೇವೆ, ತಿಂಡಿತಿನಿಸುಗಳು ಇತರ ಸೌಲಭ್ಯಗಳನ್ನು ಸರ್ಕಾರ ಒದಗಿಸಿದ್ದೇ ಆದಲ್ಲಿ ಮಹಿಳೆಯರು ಮನೆಗೆಲಸದಿಂದ, ಬಂಧನಗಳಿಂದ ಹೊರಗಡೆ ಬರಲು ಸಾಧ್ಯವಾಗುತ್ತದೆ. ಆಗ ಅವರು ಸ್ವತಂತ್ರವಾಗಿ ದುಡಿಮೆ ಮಾಡಬಹುದು, ಸ್ವತಂತ್ರ ನಿರ್ಧಾರಗಳನ್ನು ತೆಗೆದುಕೊಳ್ಳಬಹುದು. ಮನೆಗೆಲಸವನ್ನು ಹಂಚಿಕೊಳ್ಳುವ ಬಗ್ಗೆ ಕೂಡಾ ಪುರುಷರಲ್ಲಿ ಒಂದು ದೃಷ್ಟಿಕೋನವನ್ನು ಹುಟ್ಟುಹಾಕಲು ಅನೇಕ ಕಾರ್ಯಾಗಾರಗಳ ಜೊತೆ ಕಾನೂನು ಪರಿಮಿತಿಯಲ್ಲಿಯೂ ಕೂಡಾ ಒತ್ತಾಯಿಸುವ ಅಗತ್ಯ ಇದೆ. ಆಗ ಶತಮಾನಗಳಿಂದ ಲೈಂಗಿಕ ಆಧಾರದ ಮೇಲೆ ರೂಪುಗೊಂಡ ಶ್ರಮವಿಭಜನೆಯನ್ನು ಸವಾಲು ಮಾಡುವುದೂ ಸಾಧ್ಯವಾಗುತ್ತದೆ. ಹಾಗಾಗಿ ಕೃಷ್ಣ ಥಿರತ್‌ರವರ ಸಲಹೆ ಸರ್ಕಾರವನ್ನು, ಪ್ರಭುತ್ವವನ್ನು ಜವಾಬ್ದಾರಿಗಳಿಂದ ನುಣುಚಿಕೊಳ್ಳುವಂತೆ ಮಾಡುವುದರಿಂದ ಕುಟುಂಬದ ಬಗೆಗಿನ ಅವರ ವ್ಯಾಖ್ಯಾನವನ್ನೂ, ಆರ್ಥೈಸುವಿಕೆಯನ್ನೂ, ಮಸೂದೆಯ ಬಗ್ಗೆಗಿನ ಅವರ ಸಲಹೆಯನ್ನೂ ನಾವು ಟೀಕಿಸಬೇಕಾಗುತ್ತದೆ. ❑



ಮಲಾಲ ಹದಿನಾಲ್ಕು ವರ್ಷದ ಹುಡುಗಿ. ತನಗಷ್ಟೇ ಅಲ್ಲದೇ ತನ್ನೂರು ಮಿಂಗೋರಾದಲ್ಲಿರುವ ಇತರ ಹುಡುಗಿಯರಿಗೂ ಶಿಕ್ಷಣದ ಸೌಲಭ್ಯ ದೊರಕುವಂತೆ ಮಾಡಲು ಹೆಣಗುತ್ತಿರುವ ಪುಟ್ಟ ಬಾಲೆ.

ಇತ್ತೀಚಿಗೆ ಅವಳು ಶಾಲೆಯಿಂದ ಮನೆಗೆ ಬರುತ್ತಿರುವಾಗ ಪಾಕಿಸ್ತಾನದ ತಾಲಿಬಾನ್ ಸಂಘಟನೆಯ ಮಿಲಟರಿ ಅವಳಿಗೆ ಗುಂಡಿಕ್ಕಿತು. ಜಾತ್ಯಾತೀತತೆಯನ್ನು ಎತ್ತಿ ಹಿಡಿದಿದ್ದಕ್ಕಾಗಿ ಅವಳಿಗೆ ದೊರೆತ ಶಿಕ್ಷೆಯಿದು. ಅಂದಿನಿಂದ ಆಕೆ ಹಿಂಸೆಯ ಸಮಾಜದಲ್ಲಿ ಶಾಂತಿಯ ಸಂಕೇತವಾಗಿ ಪರಿಗಣಿತಳಾಗಿದ್ದಾಳೆ.

ಮಹಿಳಾವಾದಿಗಳು, ಶೈಕ್ಷಣಿಕ ಚಳುವಳಿಗಾರರು ಎಲ್ಲರೂ ಅವಳ ಪರವಾಗಿ ಜಗತ್ತಿನಾದ್ಯಂತ ಹೋರಾಟಕ್ಕಿಳಿದಿದ್ದಾರೆ. ಈ petition ಪಾಕಿಸ್ತಾನದಲ್ಲಷ್ಟೇ ಅಲ್ಲದೇ ಜಗತ್ತಿನಾದ್ಯಂತ ಬಾಲಕಿಯರಿಗೆ ಶಿಕ್ಷಣದ ಭರವಸೆ ನೀಡಲು ಒತ್ತಾಯಿಸಿದೆ. ಇದನ್ನು ಪಾಕಿಸ್ತಾನದ ಅಧ್ಯಕ್ಷರಾದ ಅಸಿಫ್ ಅಲಿ ಜರದಾರಿ ಹಾಗೂ ಯು.ಎನ್ ಕಾರ್ಯದರ್ಶಿ ಬಾನ್ ಕಿ ಮೂನ್ ಅವರಿಗೂ ನವೆಂಬರನಲ್ಲಿ ಕಳಿಸಲಾಗುತ್ತದೆ.

ಮಲಾಲ ರಾಷ್ಟ್ರೀಯ ಯುವ ಶಾಂತಿ ಪ್ರಶಸ್ತಿಯನ್ನು ಪಡೆದಿದ್ದಾಳೆಯಷ್ಟೇ ಅಲ್ಲದೇ ಅಂತರಾಷ್ಟ್ರೀಯ ಮಕ್ಕಳ ಶಾಂತಿ ಪ್ರಶಸ್ತಿಗೂ nominate ಆಗಿದ್ದಾಳೆ. ಮಲಾಲ ಪಾಕಿಸ್ತನಕ್ಕೆ ಹಿಂದಿರುಗಿದರೆ ಅವಳನ್ನು ಕೊಲ್ಲುವುದಾಗಿ ತಾಲಿಬಾನ್ ಎಚ್ಚರಿಸಿದ್ದರೂ, ಆಕೆಯ ತಂದೆ ಜಿಯವುದ್ದೀನ್ ಅವರು ಕುಟುಂಬ ಸಮೇತ ತಾಯ್ನೆಲಕ್ಕೆ ಮರಳಿ, ಮಲಾಲ ಆಕೆಯ ಶಾಲಾ ಪರೀಕ್ಷೆಗಳಿಗೆ ಹಾಜರಾಗುವ ಆಕಾಂಕ್ಷೆ ವ್ಯಕ್ತಪಡಿಸಿದ್ದಾರೆ.

*ಇವತ್ತು ಮಲಾಲಾಳ ಮನವಿಯ ಮೇಲೆ ಹಾಕಿದ ರುಜುವಿನ ಸಂಖ್ಯೆ ಯು.ಎನ್. ಶಿಕ್ಷಣ ರಾಜ್ಯ ಪ್ರತಿನಿಧಿಯ ಜಾಲತಾಣ 'ಆವಾಜ್', 'ವಿಮೆನ್ ಆಫ್ ದ ವರ್ಲ್ಡ್' ಮತ್ತು ಇತರ ಜಾಲತಾಣಗಳ ಮಾರ್ಗದರ್ಶನದಲ್ಲಿ* ***iammalala.org*** *ನಲ್ಲಿ ಒಂದು ಮಿಲಿಯನ್‌ಗೆ ಸಮೀಪಿಸಿದೆ.*




# ಹೊರಳುದಾರಿಯಲ್ಲಿನ ಮಹಿಳಾ ಕಥಾ ಸಾಹಿತ್ಯಕ್ಕೊಂದು ದಿಕ್ಸೂಚಿ ಮಾಲತಿ ನಾಡಿಗ್ ಅವರ "ಸಮಾನತೆ"

■ ಗಿರಿಜಾಶಾಸ್ತ್ರಿ
ಮುಂಬಯಿ

ಮಾಲತಿ ನಾಡಿಗ್ ಅವರು ತಮ್ಮ "ಸಮಾನತೆ" ಕಥಾ ಸಂಕಲನವನ್ನು ಕೆಲವು ತಿಂಗಳುಗಳ ಹಿಂದೆಯೇ ಕಳಿಸಿದ್ದರು. ಅದನ್ನು ಬಿಡುಗಡೆ ಮಾಡಿದ ಕೆ. ಸತ್ಯನಾರಾಯಣ ಅವರು "ಓದಿ ಮೇಡಂ ಡಿಫರೆಂಟ್ ಆಗಿದೆ" ಎಂದಿದ್ದರು. ಅದನ್ನು ಓದಿದ ನನ್ನ ಸಂಗಾತಿ ರಘುನಾಥ್ ಕೂಡ "ಮೇಲು ನೋಟಕ್ಕೆ ಇವು ಸರಳ ಕತೆಗಳಾದರೂ ಅವುಗಳಲ್ಲಿ ಸೃಜನಶೀಲತೆಯ ಎಳೆಗಳಿವೆ, ಒಂದು ಅಗೋಚರ ಕಾಣ್ಕೆಯಿದೆ ಓದಿ ನೋಡು, ಏನಾದರೂ ಬರಿ" ಎಂದೆಲ್ಲಾ ಹೇಳಿದ ಮೇಲೂ ಒಮ್ಮೆ ಓದಿ, 'ಬರೆದರಾಯಿತು' ಎಂದು ಪಕ್ಕಕ್ಕೆ ಇಟ್ಟುಬಿಟ್ಟಿದ್ದೆ. ಕಾರಣ ನನ್ನ ಟೇಬಲ್ಲಿನ ಮೇಲೆ ಹಿಂದೆಯೇ ಪೇರಿಸಿಟ್ಟಿಕೊಂಡಿದ್ದ ಪುಸ್ತಕಗಳು ನನ್ನನ್ನು ಹೆದರಿಸುತ್ತಿದ್ದವು. ಮಾಲತಿಯವರ ಪುಸ್ತಕವನ್ನು ಸುಮತೀಂದ್ರ ನಾಡಿಗ್‌ರಿಂದ ಪಡೆದು ನನಗೆ ತಲಪಿಸಿದ್ದ ಪಲ್ಲಣ್ಣ (ಪ್ರಹ್ಲಾದ್ ದಿವಾಣಜಿ) 'ಓ, ಈಗ ನೀವು ಫುಲ್ ಟೈಮ್ ವಿಮರ್ಶಕರಾಗಿಬಿಟ್ಟಿದ್ದೀರಿ' ಎಂದು ಛೇಡಿಸಿದ್ದರು. ಅದನ್ನು ನಾನು ಹೊಗಳಿಕೆಯೆಂದೇ ಭಾವಿಸಿದ್ದೆ. 'ಸಮಾನತೆ' ಕೊನೆಯ ಆದ್ಯತೆ ಎನ್ನುವಂತೆ ಎಲ್ಲ ಪುಸ್ತಕಗಳ ಅಡಿಯಲ್ಲಿತ್ತು. ಒಂದು ದಿನ 'ಇಂಗ್ಲಿಷ್- ವಿಂಗ್ಲಿಷ್' ಸಿನೆಮಾ ನೋಡಿ ಕೊಂಡು ಬಂದೆ. ಆ ತಕ್ಷಣ, ಅರೆ, ಮಾಲತಿ ಮೇಡಂ ಅವರ ಪುಸ್ತಕದ ಮಹತ್ವ ನನಗೆ ಹೊಳೆದಿರಲೇ ಇಲ್ಲವಲ್ಲ ಎನಿಸಿಬಿಟ್ಟಿತು. ನಾಡಿಗ್ ಸಾರ್ ತುಂಬಾ ಸಾರಿ.

ಇಂಗ್ಲಿಷ್-ವಿಂಗ್ಲಿಷ್ ದ ನಾಯಕಿ ಶಶಿ ಶಿಂಧೆ ಒಬ್ಬ ಸಾಮಾನ್ಯ ಗೃಹಿಣಿ! ಎಲ್ಲ ಗೃಹಿಣಿಯರಂತೆ ಪಾಕ ಪ್ರವೀಣೆ. ಲಾಡು ಮಾಡುವುದರಲ್ಲಂತೂ ಎತ್ತಿದ ಕೈ, ಅದರದೇ ಒಂದು ಸಣ್ಣ ಉದ್ಯಮ. ಇಂಗ್ಲಿಷ್ ಸರಿಯಾಗಿ ಬಾರದ ಅವಳು ಸದಾ ಗಂಡ ಮಕ್ಕಳಿಂದ ಗೇಲಿಗೆ ಗುರಿಯಾಗುತ್ತಾಳೆ. ಕೀಳರಿಮೆ ಅನುಭವಿಸುತ್ತಾಳೆ. ಅಕ್ಕನ ಮಗಳ ಮದುವೆಯ ಸಲುವಾಗಿ ಅವಳು ಕೆಲವು ವಾರಗಳ ಮಟ್ಟಿಗೆ ಅಮೆರಿಕೆಗೆ (ಮ್ಯಾನ್‌ಹ್ಯಾಟನ್) ಗೆ ಹೋಗಬೇಕಾಗುತ್ತದೆ. ಅಲ್ಲಿಂದ ಅವಳ ವಿಜಯ ಯಾತ್ರೆ ಪ್ರಾರಂಭವಾಗುತ್ತದೆ. ಅಲ್ಲಿ ಯಾರಿಗೂ ತಿಳಿಯದಂತೆ ಇಂಗ್ಲಿಷ್ ಕಲಿಯುವ ಶಾಲೆಗೆ ಸೇರಿಕೊಳ್ಳುತ್ತಾಳೆ. ಅವಳ ಮುದುರಿದ ರೆಕ್ಕೆಗಳು ಬಿಚ್ಚಿಕೊಳ್ಳುತ್ತವೆ. "woman cooking duty, small. man cooking art, why? ಎಂದು ಹರಕು ಮುರಕು ಇಂಗ್ಲಿಷ್‌ನಲ್ಲಿ ತನ್ನ ಫ್ರೆಂಚ್ ಸಹಪಾಠಿಯೊಂದಿಗೆ ಕೇಳುವ ಪ್ರಶ್ನೆಗೆ, "no , no, not small Shashi, you are a great artist" ಎಂದು ಅವನು ಉತ್ತರ ಕೊಡುತ್ತಾನೆ. ನಮ್ಮ ಸಾಹಿತ್ಯ ಪರಂಪರೆಯಲ್ಲಿ ಮನೆಯೊಳಗಿನ ಈ 'ಅಡು'ಕೃತ್ಯ ಅಲಕ್ಷ್ಯಕ್ಕೆ, ಪರಿಹಾಸ್ಯಕ್ಕೆ ಒಳಗಾಗಿದೆ. ಅದಕ್ಕೆ ಕಾರಣ ಅದರ ಒಡೆತನ ಹೆಣ್ಣಿನ ಕೈಯಲ್ಲಿರುವುದು. ಅದಕ್ಕೇನಾದರೂ ಪ್ರಾಶಸ್ತ್ಯ ಸಿಕ್ಕಿರುವುದಾದರೆ ಅದು 'ಭೀಮ' 'ನಳ' ರಿಂದ ಮಾತ್ರ. ಅದು ಈಗ ದೊಡ್ಡ ಉದ್ಯಮವಾಗಿ ಬೆಳೆದು, ಅಂತರಾಷ್ಟ್ರೀಯ ನೆಲೆಯಲ್ಲಿ ಮಹತ್ವವನ್ನು ಪಡೆದುಕೊಂಡಿರುವುದಕ್ಕೆ, ವಿದೇಶೀ ನೆಲಗಳಲ್ಲಿ ಈ ಕುರಿತು ನಡೆಯುವ ಸ್ಪರ್ಧೆಗಳೇ ಸಾಕ್ಷಿ. ಸಿನಿಮಾದಲ್ಲಿ 'ಓ ಇಲ್ಲಿರುವ ವಿದ್ಯಾರ್ಥಿಗಳೆಲ್ಲಾ ಉದ್ಯಮಿಗಳೇ' ಎಂದು ಇಂಗ್ಲಿಷ್ ಶಿಕ್ಷಕ ಉದ್ಗಾರ ತೆಗೆಯುತ್ತಾನೆ. ಶಶಿಯನ್ನು ಶ್ರೇಷ್ಠ ಉದ್ಯಮಿ ಎನ್ನುತ್ತಾನೆ. 'No, sir small' ಎನ್ನುತ್ತಾ , ಅವಳು ತನ್ನ ಬೆರಳುಗಳನ್ನು ಗೋಲಿಯ ಆಕಾರ ಮಾಡುತ್ತಾಳೆ. ಆದರೆ ಕೇವಲ ಉದ್ಯಮಿಗೆ ಕುಟುಂಬದ ಸೌಖ್ಯದ ಬಗೆಗಿನ ಜಾಗರಣೆ, ಗಂಡ ಮಕ್ಕಳ ಬಗೆಗೆ ಎಣೆಯಿಲ್ಲದ ಎಚ್ಚರ, ಪ್ರೀತಿ ಎಲ್ಲಿಂದ ಬರಬೇಕು? ಈ ನೆಲೆಯಲ್ಲಿ ನನಗೆ ಕಡಂಗೋಡ್ಲು ಶಂಕರಭಟ್ಟರ 'ಅದ್ದಿಟ್ಟು' ಕತೆ, ಬಹಳ ಮಹತ್ವದ್ದಾಗಿ ತೋರುತ್ತದೆ.

ನಮ್ಮ ಸಾಂಸ್ಕೃತಿಕ ಭೇದ ನೀತಿಯನ್ನು ಈ ಸಿನಿಮಾದಲ್ಲಿ ಅನನ್ಯವಾಗಿ ಚಿತ್ರಿಸಲಾಗಿದೆ. ಇದು ನಾಗರಿಕತೆ, ಆಧುನಿಕತೆಗಳ ಹುಸಿಜಂಬಗಳನ್ನು, ಇಂಗ್ಲಿಷ್ ಶ್ರೇಷ್ಠತೆಯ ಭ್ರಮೆಯನ್ನು , ಗೃಹಿಣಿಯ ಬಗೆಗಿನ doormat ಧೋರಣೆಯನ್ನು ಏಕಕಾಲಕ್ಕೆ ಬಯಲಿಗೆಳೆಯು



ತ್ತದೆ. 'How you will manage in America without knowing English?' ಎಂದು ಅವಳಿಗೆ ಕೇಳುವ ಪ್ರಶ್ನೆಗೆ, ಅಲ್ಲೇ ಇದ್ದ ಒಬ್ಬ ಭಾರತೀಯ ಕೊಡುವ 'As you are managing In India without knowing Hindi', ಎನ್ನುವ ಮಾತು ಗಳಲ್ಲಾಗಲೀ 'Why The United Nations of America? Why not The India' ಎನ್ನುವ ಸವಾಲುಗಳಲ್ಲಾಗಲೀ, ಅನೇಕ ಭಾಷೆಗಳಿಂದ ಎರವಲು ಪಡೆದುಕೊಂಡಿರುವ ಇಂಗ್ಲಿಷ್ ಭಾಷೆಯ (ಕುಲಗೆಟ್ಟ) ರಚನೆಯ ಕುರಿತಾದ ಟೀಕೆಯೇ ಅಡಗಿದೆ. ಅದರ ಮೂಲಕ ಆ ಭಾಷೆಯ ಹಿಪಾಕ್ರಸಿಯನ್ನೂ ಇದು ಬಯಲು ಮಾಡುತ್ತದೆ.

ಇಷ್ಟೆಲ್ಲಾ ಹೇಳುವುದಕ್ಕೆ ಕಾರಣ, ನಮ್ಮ ವಿಮರ್ಶೆಯ ಸ್ವರೂಪಕ್ಕೂ ಇಂತಹುದೇ ಶ್ರೇಷ್ಠತೆಯ ಗರ ಬಡಿದಿದೆ. ನಾವು ಇನ್ನೂ ನಮ್ಮನ್ನು ಇಂಗ್ಲಿಷ್ ಮನಸ್ಥಿತಿಯಿಂದ ಬಿಡಿಸಿಕೊಂಡಿಲ್ಲ. ಮಹಿಳೆಯರ ಬರಹಗಳ ಬಗ್ಗೆ ಪುರುಷ ವಿಮರ್ಶಕರು ಏನಾದರೂ ಹೇಳಿಕೊಳ್ಳಲಿ, ಆದರೆ ಹೆಸರಾಂತ ವಿಮರ್ಶಕಿಯರೂ ಪುರುಷರ ಮಾದರಿಗೇ ಬಿದ್ದಿರುವುದು ಶೋಚನೀಯ ಸಂಗತಿ. ತಿರುಮಲಾಂಬಾ, ಕಲ್ಯಾಣಮ್ಮ, ತ್ರಿವೇಣಿ, ಅನುಪಮಾ, ಎಂ.ಕೆ. ಇಂದಿರಾ ಅವರುಗಳು ಬದುಕಿದ್ದ ಕಾಲದಲ್ಲಿಯೂ ಅವರಿಗೆ ಸಿಕ್ಕ ಪ್ರತಿಫಲ ಇದುವೇ ಆಗಿತ್ತು. ರಾಷ್ಟ್ರೀಯ ಚಳವಳಿಯ ಸಂದರ್ಭದಲ್ಲಿ ಪುರುಷರೇ ಮಹಿಳಾ ಪ್ರಶ್ನೆಯನ್ನು ಕೈಗೆತ್ತಿಕೊಂಡಂತೆ, ಈ ನವವಸಾಹತುಶಾಹಿ ಸಂದರ್ಭದಲ್ಲೂ ಅವರೇ ಮಹಿಳಾ ಸಾಹಿತ್ಯದ ಬಗ್ಗೆ ಹೊಸ ವಿಮರ್ಶೆಯ ಪರಿಭಾಷೆಯನ್ನು ಸೃಷ್ಟಿಸಬೇಕೇನೋ. (ಮಾಲತಿಯವರ ಕತೆಗಳಿಗೆ ಪ್ರತಿಕ್ರಿಯಿಸಿದ ಕೆ. ಸತ್ಯನಾರಾಯಣ ಹಾಗೂ ಕೆ. ರಘುನಾಥ್ ಮತ್ತು ನನ್ನ ಪ್ರತಿಕ್ರಿಯೆಗಳನ್ನು ಗಮನದಲ್ಲಿಟ್ಟುಕೊಂಡು ಈ ಮಾತುಗಳನ್ನು ಹೇಳುತ್ತಿದ್ದೇನೆ.)

ಈಗ್ಗೆ ಕೆಲವು ವರ್ಷಗಳ ಹಿಂದೆ, ಕರ್ನಾಟಕ ಲೇಖಕಿಯರ ಸಂಘದವರು ಎರಡು ದಿನಗಳ ಒಂದು ದೊಡ್ಡ ಮಹಿಳಾ ಸಾಹಿತ್ಯ ಸಮ್ಮೇಳನವನ್ನು ಮಾಡಿದ್ದರು. ಅಲ್ಲಿದ್ದ ಲೇಖಕಿಯರೆಲ್ಲಾ ಹಗಲೂ ರಾತ್ರಿ ಕಷ್ಟ ಬಿದ್ದು ಎಲ್ಲ ವ್ಯವಸ್ಥೆಗಳನ್ನೂ ಆಯೋಜಿಸಿದ್ದರು. ಅವರಲ್ಲಿ ಬಹಪಾಲು ಜನ ಮೂವತ್ತು ನಲವತ್ತು ಕತೆ, ಕಾದಂಬರಿಗಳನ್ನು ಬರೆದವರಾಗಿದ್ದರು. ಆ ಸಮ್ಮೇಳನದ ವಿಚಾರ ಸಂಕಿರಣಕ್ಕೆ ಹೆಸರಾಂತ ವಿಮರ್ಶಕ, ವಿಮರ್ಶಕಿಯರನ್ನೇ ಕರೆಸಲಾಗಿತ್ತು, ಅವರಲ್ಲಿ ಯಾರೊಬ್ಬರೂ ಈ ಮಹಿಳೆಯರ ಕತೆ, ಕಾದಂಬರಿಗಳನ್ನು ಉಲ್ಲೇಖಿಸಲಿಲ್ಲ. ಖೇದಗೊಂಡ ನಾನು, 'ಸರ್, ಜನಪ್ರಿಯ ಮತ್ತು ಗಂಭೀರ ಸಾಹಿತ್ಯ ಅಂತ ವಿಭಾಗ ಮಾಡುವುದು ಸರಿಯಾ?' ಎಂದು, ಅಲ್ಲಿಗೆ ಬಂದಿದ್ದ ಜಿ.ಎಸ್. ಎಸ್ ಅವರನ್ನು ಕೇಳಿದ್ದೆ. ಅದಕ್ಕೆ ಅವರು, 'ಅವೆಲ್ಲಾ non sense, writer is writer' ಎಂದು ಉತ್ತರ ಕೊಟ್ಟಿದ್ದರು.

**ಸಮಾನತೆ** ಕಥಾ ಸಂಕಲನ

ಲೇಖಕರು : ಮಾಲತಿ ನಾಡಿಗ್
ಬೆಲೆ : ರೂ. 65/-
ಪ್ರಕಾಶನ : ಸಪ್ನ ಬುಕ್ ಹೌಸ್ ಬೆಂಗಳೂರು




ಕರುಳು ಬಗೆದು ಕೊಡುವುದು ಏನೆಂದು ಹೆಣ್ಣಿಗೆ ಮಾತ್ರ ಗೊತ್ತು. ಹೊಟ್ಟೆಗೆ ಬೆಂಕಿ ಬಿದ್ದಾಗ ಅರಚಬೇಡ, ಕಿರುಚ ಬೇಡ, scene create ಮಾಡಬೇಡ ಎಂದು ಸಭ್ಯತೆಯ ಪಾಠ ಹೇಳಿಕೊಡಲು ಬಂದರೆ? ಮಗು ಹುಟ್ಟಿದಾಗಿನಿಂದ ಹಿಡಿದು ಅದು ಎಷ್ಟೇ ಬೆಳೆದು ದೊಡ್ಡದಾದರೂ ತಾಯಿಗೆ ಸದಾ ಕಾಯುವ ಎಚ್ಚರ, ಅಸುರಕ್ಷತೆಯ ಭಯ! ಎಲ್ಲ ತಾಯಂದಿರಿಗೆ ಮಕ್ಕಳು ಹೊರಗೆ ಹೊರಟಾಗ 'ಜೋಕೆ' ಎಂದು ಎಚ್ಚರಿಸುವುದು ವಾಡಿಕೆ, ನನ್ನ ಗೆಳತಿ ಶ್ಯಾಮಲಾ, ಮಗ ಮಲಗಲಿಕ್ಕೆ ಹೋಗುವಾಗಲೂ ಜೋಕೆ ಎಂದು ಹೇಳಿದ್ದನ್ನು ನೆನೆಪಿಸಿಕೊಂಡು ನಕ್ಕಿದ್ದರು. ಹೀಗೆ ತಾಯಿ ಸದಾ ಈದ ಹುಲಿ! 'ಇಂಗ್ಲಿಷ್..' ನಲ್ಲಿ ಶಶಿಯನ್ನು, ಅವಳ ಶಿಕ್ಷಕ ಶ್ರೇಷ್ಠ ಉದ್ಯಮಿ ಎನ್ನುತ್ತಾನೆ. 'No, sir small' ಎನ್ನುತ್ತಾ , ಬೆರಳುಗಳನ್ನು ಗೋಲಿಯ ಆಕಾರ ಮಾಡುತ್ತಾಳೆ. ಆದರೆ ಕೇವಲ ಉದ್ಯಮಿಗೆ ಕುಟುಂಬದ ಸೌಖ್ಯದ ಬಗೆಗಿನ ಜಾಗರಣೆ, ಗಂಡ ಮಕ್ಕಳ ಬಗೆಗೆ ಎಣೆಯಿಲ್ಲದ ಎಚ್ಚರ, ಪ್ರೀತಿ ಎಲ್ಲಿಂದ ಬರಬೇಕು?

ನಮ್ಮ ಸಾಹಿತ್ಯ ಚಿಂತನೆಯ ಸ್ವರೂಪ ಸೈದ್ಧಾಂತಿಕ ನೆಲೆಯಿಂದ ಸಾಂಸ್ಕೃತಿಕ ನೆಲೆಗೆ ಹೊರಳಿ ಬಹಳ ಕಾಲವಾಯಿತು. ಆದರೂ ನಾವು ಮಹಿಳೆಯರು, ಇನ್ನೂ ಹಳೆಯ ಜಾಡಿನಲ್ಲೇ ಸಾಗುತ್ತಿದ್ದೇವೆ. ಎಲ್ಲ ಮಹಿಳೆಯರ ಬರಹಗಳ ಬಗ್ಗೆ ಇನ್ನಾದರೂ ಬರೆಯಬೇಕು. ಆ ಬರಹಗಳ ಮನೋವೈಜ್ಞಾನಿಕ ನೆಲೆಗಳ ಬಗ್ಗೆ ಕೇಂದ್ರೀಕರಿಸಬೇಕು.

ಇಷ್ಟು ದೊಡ್ಡ ಪೀಠಿಕೆಗೆ ಕಾರಣ, ಮಾಲತಿಯವರ ಕತೆಗಳ ಬಗ್ಗೆ ನಾನು ಮೊದಲು ತಳೆದ ಧೋರಣೆ ಮತ್ತು 'ಇಂಗ್ಲಿಷ್-ವಿಂಗ್ಲಿಷ್' ನೋಡಿದ ಮೇಲೆ ಆ ಸಿನಿಮಾದಲ್ಲಿ ತೋರಿದ ಎಲ್ಲ ಅಂಶಗಳೂ ಈ ಕತೆಗಳಲ್ಲಿವೆ ಎಂಬುದು ಅರಿವಿಗೆ ಬಂದು ನನ್ನ ಧೋರಣೆಯನ್ನು ಬದಲಾಯಿಸಿಕೊಂಡದ್ದು. ಇಂದಿನ ಆಧುನಿಕ ಸಮಾಜದಲ್ಲಿ ಕುಟುಂಬ ವಿಘಟನೆಯಾಗುತ್ತಿರುವುದು ವಾಸ್ತವ ಸಂಗತಿ. ನಮ್ಮ ಸಂಸ್ಕೃತಿಯಲ್ಲಿ ಕುಟುಂಬ ವ್ಯವಸ್ಥೆಗೆ ಇನ್ನೊಂದು ಪರ್ಯಾಯವಿಲ್ಲ. ಹಾಗೇ ವಿಘಟನೆಗೂ ಪರಿಹಾರವಿಲ್ಲ. ಇದ್ದರೂ ಅದು ಪಿತೃಪ್ರಧಾನ ಸಂಸ್ಕೃತಿಯಲ್ಲಿ ಹೆಣ್ಣಿನ ಪಾಲಿಗೆ ಮಾತ್ರ ಬಾಣಲೆ ಮತ್ತು ಬೆಂಕಿಯ ನಡುವಿನ ಆಯ್ಕೆಯದು. ಗಂಡ ಹೆಂಡತಿಯರು ತಮ್ಮ ನಡುವಿನ ಸೋಲು ಮತ್ತು ದೌರ್ಬಲ್ಯಗಳನ್ನೇ ಪರಸ್ಪರ ಗೆಲವುಗಳ ಮೆಟ್ಟಿಲು ಗಳನ್ನಾಗಿ ಮಾಡಿಕೊಳ್ಳುವುದರ ಮೂಲಕ ಕುಟುಂಬದ ಸೌಖ್ಯ ಮತ್ತು ಸೌಹಾರ್ದತೆಯನ್ನು ಸಾಧಿಸಲು ಸಾಧ್ಯ, ಎನ್ನುವ, ಸಿನಿಮಾದ ಕೊನೆಯಲ್ಲಿ ನಾಯಕಿ ಹೇಳುವ ಮಾತುಗಳು, ಮಾಲತಿಯವರು ತಮ್ಮ ಕತೆಗಳ ಮೂಲಕ ವ್ಯಕ್ತಪಡಿಸಿದ ದೃಷ್ಟಿಕೋನವನ್ನೇ ಹೊರಗೆಡಹುತ್ತದೆ. ಇದು ಮಹಿಳಾ ಸಾಹಿತ್ಯದ ಹೊರಳು ದಾರಿಯ ಗಮನಕ್ಕೆ ನಾಂದಿಯಾಗಲಿ.

ಈ ಕತೆಗಳಲ್ಲಿ ಶಶಿಯ ಅನೇಕ ಮುಖಗಳನ್ನು ಲೋ ಮೈಮಾಟಿಕ್ ನೆಲೆಯಲ್ಲಿ ಮಾಲತಿಯವರು ದಾಖಲಿಸಿದ್ದಾರೆ. ಇಲ್ಲಿ ಮಧ್ಯಮ ವರ್ಗದ ಗೃಹಿಣಿಯೇ ನಾಯಕಿ. ಹೆಚ್ಚು ಕಲಿತವಳಲ್ಲ. ನಾಗರಿಕತೆಯ ಧೂರ್ತತೆಯ ಅರಿವಿಲ್ಲ, ಅನುಕಂಪ, ಪ್ರೀತಿ, ತನ್ನಂತೆ ಬಗೆವ ರೀತಿ, ಎಲ್ಲವೂ ಸೀದಾ ಸಾದಾ ಅಪ್ಪಟ ಗೃಹಿಣಿಯ ಮಾದರಿ. ಕೋಪ ಬಂದಾಗ ಕಿರುಚುವ, ದುಃಖವಾದಾಗ ಗೋಳಿಡುವ, ಅನ್ಯಾಯವಾದಾಗ ಹುಲಿಯಂತೆ ಎಗರಿ ಬೀಳುವ ಭೋಳೆ ಮಾನುಷಿ.

* * * *

ಸಿದ್ಧಮಾದರಿಗಳಿಗೆ ಒಡ್ಡಿಕೊಂಡು ಮೌನವಾಗಿ ಬದುಕುವ ವರ್ಗವೊಂದಿದೆ. ಯಾವುದೇ ಅಪಾಯಗಳಿಂದ ಸುರಕ್ಷಿತ ಅಂತರವನ್ನು ಕಾಪಾಡಿಕೊಂಡು ಹುಸಿ ಸುಖದಲ್ಲಿ ಬದುಕುವ ವರ್ಗವಿದು. ಇನ್ನೊಂದು

ಕಡೆಗೆ ಸಿದ್ಧಮಾದರಿಗಳ ವಿರುದ್ಧ ಬಂಡೇಳುವುದಕ್ಕಾಗಿಯೇ ಸಿಡಿಯುವ ವರ್ಗವಿದೆ. ಈ ಎರಡು ಮಾದರಿಗಳಲ್ಲಿಯೂ ದಾಂಪತ್ಯ ಸೋಲುತ್ತದೆ. ಮೊದಲನೆಯದರಲ್ಲಿ ದಾಂಪತ್ಯ ಮೂಗುಬ್ಬಸದಿಂದ ನರಳಿದರೆ ಎರಡನೆಯದರಲ್ಲಿ ಛಿದ್ರಗೊಳ್ಳುತ್ತದೆ. ಎರಡೂ ಕೂಡ ಸಮಾಜದ ಆರೋಗ್ಯಕ್ಕೆ ಮಾರಕವೇ. ಎಲ್ಲಿ ಒಪ್ಪಿಕೊಳ್ಳುವುದರಲ್ಲಾಗಲೀ, ನಿರಾಕರಿಸುವುದರಲ್ಲಾಗಲೀ ಒಂದು ತಾತ್ವಿಕ ತಳಹದಿಯಿರುವುದಿಲ್ಲವೋ, ಪ್ರಜ್ಞಾಪೂರ್ವಕ ಗ್ರಹಿಕೆ ಇರುವುದಿಲ್ಲವೋ (assertive understanding) ಅಲ್ಲೆಲ್ಲಾ ದಾಂಪತ್ಯ ಸೊರಗುತ್ತದೆ. ಹೀಗೆ ಒಪ್ಪಿಕೊಳ್ಳುವ ಮತ್ತು ನಿರಾಕರಿಸುವ ಎರಡು ಅತಿಗಳ ನಡುವೆ ಒಂದು ಸುವರ್ಣ ಮಾಧ್ಯಮವಿದೆ. ಈ ಸುವರ್ಣ ಕ್ಷೇತ್ರದ ಶೋಧನೆಗೆ ಇದಮಿತ್ಥಂ ಎನ್ನುವ ಸೂತ್ರರೂಪಿ ಮಾದರಿಗಳಿಲ್ಲ. ಇದೊಂದು ವೈಯಕ್ತಿಕ ಶೋಧ. ನಾವೇ ಕಂಡುಕೊಳ್ಳಬೇಕಾದ ಸತ್ಯ. ಇದು ಯಾವಾಗಲೂ ಸಾಪೇಕ್ಷ ವಾದುದೇ. ಇದರ ಸಂಬಂಧದ ಸ್ವರೂಪ ಎಷ್ಟು ಸೂಕ್ಷ್ಮವಾದು ದೆಂದರೆ ಇದನ್ನು ಅರಗಿಸಿಕೊಳ್ಳಲು ವ್ಯಾಪಕವಾದ ಅರಿವು, ಅನಿಯಂತ್ರಿತ ಪ್ರೇಮ ಮುಖ್ಯವಾದುದು.

ಈ ಕತೆಗಳಲ್ಲಿ ವಿವಾಹ ಪೂರ್ವ ಮತ್ತು ವಿವಾಹ ಬಾಹಿರ ಸಮಸ್ಯೆಗಳಿವೆ, ಮಕ್ಕಳ ಸಮಸ್ಯೆಗಳಿವೆ, ಪೀಳಿಗೆಯ ಅಂತರಗಳಿವೆ, ಮನೆಯೊಳಗಿನ ಹಾಗೂ ಹೊರಗಿನ ದುಡಿಮೆಗೆ ಸಂಬಂಧಿಸಿದಂತೆ ಅನೇಕ ಸಮಸ್ಯೆಗಳಿವೆ. ಇವು ಮೇಲುನೋಟಕ್ಕೆ ದಾಂಪತ್ಯಕ್ಕೆ ಸಂಬಂಧಿಸದಂತೆ ಕಂಡರೂ ಇವು ಯಾವುದರಲ್ಲಿ ಏರು ಪೇರು ಉಂಟಾದರೂ ಕುಟುಂಬ ನಲುಗುತ್ತದೆ. ಮಾಲತಿ ನಾಡಿಗ್ ಅವರ 'ಸಮಾನತೆ' ಕಥಾಸಂಕಲನದ ಕತೆಗಳು ಕುಟುಂಬ ನಲಗುವ ಪರಿಯನ್ನು ಅನಾವರಣ ಗೊಳಿಸುತ್ತವೆ. ಇವು ಮೂಲಭೂತವಾಗಿ ಹೆಣ್ಣುಗಂಡುಗಳ ನಡುವಿನ ಸಮಾನತೆಯ ಪ್ರಶ್ನೆಯನ್ನೇ ಮುಖ್ಯ ಭೂಮಿಕೆಯನ್ನಾಗಿಸಿ ಕೊಂಡಿವೆ. ಸಮಾನತೆಯೆನ್ನುವುದು ಮೇಜು ಗುದ್ದುವ ವಾದ ವಿತ್ತಂಡವಾದಗಳ ಹಣಾ ಹಣಿಯಾಗದೇ, ಪರಸ್ಪರ ಅರ್ಥೈಸಿಕೊಳ್ಳುವ ಅಂತಃಕರಣದ ವಿಚಾರವಾಗಬೇಕು ಎನ್ನುವುದು ಲೇಖಕಿಯ ಕಳಕಳಿ. ಇಲ್ಲಿನ ಒಂದೊಂದು ಕತೆಯೂ ಬಹಳ ಸರಳವಾಗಿ ಇಂತಹ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳುತ್ತದೆ. ಆದರೆ ಬದುಕು ಸರಳ ರೇಖೆಯಲ್ಲ. ಸಂಕೀರ್ಣವಾದುದು. ಆದುದರಿಂದ ಉತ್ತರವೂ ಸಂಕೀರ್ಣವಾದುದೇ. ಲೇಖಕಿ ಅನೇಕ ಕಡೆ ಸರಳ ಉಪಾಯಗಳನ್ನು ಸೃಜಿಸುವುದು ಅವರ ಮುಗ್ಧ ಆಶಾವಾದವನ್ನೇ ಎತ್ತಿಹಿಡಿಯುತ್ತದೆ. "ನಾನು ಫೆಮಿನಿಸ್ಟ್ ಕತೆಗಾರ್ತಿಯಲ್ಲ ಹ್ಯೂಮನಿಸ್ಟ್ ಕತೆಗಾರ್ತಿ" ಎಂದು ಅವರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಹಾಗೆ ನೋಡಿದರೆ ಫೆಮಿನಿಸಮ್ ಎನ್ನುವುದು ಹ್ಯೂಮನಿಸಮ್‌ನ ಭಾಗವೇ. ನಿಸರ್ಗಕ್ಕೆ ಲಿಂಗ ರಾಜಕಾರಣ ಗೊತ್ತಿಲ್ಲ. ಫೆಮಿನಿಸಂ ಎನ್ನುವುದು ನೈಸರ್ಗಿಕ ಸಾಮ್ಯತೆಯ ಹೋರಾಟ. ತಾಳಿಕೆ (tolerance) ನಿಸರ್ಗದ ಮೂಲ ಗುಣ. ಹೆಣ್ಣು ಕೂಡ ಅದರ ಪ್ರತಿ ಮೂರ್ತಿಯೇ! ಇದನ್ನು ಅಸಹಾಯಕತೆಯೆಂದೂ, ದೌರ್ಬಲ್ಯವೆಂದೂ ಚರಿತ್ರೆಯಲ್ಲಿ ತಪ್ಪಾಗಿ ಗ್ರಹಿಸಲಾಗಿದೆ. ಅಂತಹ ತಾಳಿಕೆಯ ಗುಣದ ತಾಯಂದಿರು ಈ ಕತೆಗಳಲ್ಲೆಲ್ಲಾ ತುಂಬಿದ್ದಾರೆ. ಮಾಸ್ತಿಯವರ ಕತೆಗಳ ಶಕ್ತಿಯಿರುವುದೇ ಮನುಷ್ಯನ ಈ ತಾಳಿಕೆಯ ಗುಣವನ್ನು ಎತ್ತಿಹಿಡಿಯುವಲ್ಲಿ. ನಮ್ಮ ಕತೆಗಾರ್ತಿಯರು ಲಾಗಾಯ್ತಿನಿಂದಲೂ ಇದನ್ನು ಮಾಡುತ್ತಲೇ ಬಂದಿದ್ದಾರೆ. ಆದರೆ ಮಾಸ್ತಿಯವರಿಗೆ ಸಿಕ್ಕ ಪ್ರಾಶಸ್ತ್ಯದಲ್ಲಿ ಕಾಲಂಶ ವಾದರೂ ಇವರಿಗೆ ಸಿಕ್ಕಿಲ್ಲ.

ಈ ಕಥಾಸಂಕಲನದ ಲಲಿತ (ಮೌನಗೆಲ್ಲಲಿಲ್ಲ), ನಾಯಕಿ ಹಾಗೂ ನಿಂಗಮ್ಮ, (ಸ್ವರ್ಗನರಕ), ಲತಾ (ಸ್ವವಶ–ಪರವಶ), ವಿಮಲ (ಹೀಗೇಕಾಯಿತು?), ಪಾರ್ವತಿ (ಅಬಲೆ), 'ಶ್ವೇತಳ ಪ್ರೇಮಿ' ಎನ್ನುವ ಒಬ್ಬ ಕೊಲೆಗಾರ್ತಿಯ ಕತೆಯೊಂದನ್ನು ಬಿಟ್ಟರೆ ಇವರೆಲ್ಲರೂ ಮುಗ್ಧತೆಯ ಕಣ್ಣುಗಳಿಂದಲೇ ಜಗತ್ತನ್ನು ನೋಡುವವರು, ಹೆಣ್ಣಿನ ಮಾನವೀಯ ಗುಣಗಳನ್ನು ಎತ್ತಿಹಿಡಿಯುವವರು. ಇಲ್ಲಿನ ಕತೆಗಳಲ್ಲಿ ಹೆಣ್ಣುಗಂಡಿನ ಸಂಬಂಧದಲ್ಲಿ ಸಮತೋಲವನ್ನು ಸಾಧಿಸಿರುವುದು ಲೇಖಕಿಯ ವೈಶಿಷ್ಟ್ಯ. ಅನೇಕ ಸಲ ಮುಗ್ಧತೆಯಿಂದ ಮಹಿಳೆ ಮೋಸಕ್ಕೆ ಒಳಗಾಗುವ ಅಪಾಯ ಕೂಡ ಇದೆ ಎಂಬುದನ್ನು 'ಬ್ರೇಕಿಂಗ್ ನ್ಯೂಸ್' ಕತೆ ಬಯಲಾಗಿಸುತ್ತದೆ. ದಾಂಪತ್ಯದ ವಿಘಟನೆಗೆ ಇಲ್ಲಿ ಗಂಡಸರೇ ಕಾರಣರಾಗುವುದಿಲ್ಲ. ಹೆಣ್ಣಿನ ಸಂಶಯ ಪ್ರವೃತ್ತಿ, ಸಂಕುಚಿತ ಮನೋಭಾವವೂ ಕಾರಣವಾಗುತ್ತದೆ ಎನ್ನುವ ಅಂಶವನ್ನು ಹೇಳುವ 'ದಾಂಪತ್ಯದ ದಾರಿ' ಕತೆ ಲೇಖಕಿಯ ಪೂರ್ವಗ್ರಹ ರಹಿತ ದೃಷ್ಟಿಕೋನವನ್ನು ತೋರಿಸುತ್ತದೆ. ಗಂಡಸೂ ಅನ್ಯಾಯಕ್ಕೆ ಒಳಗಾಗುತ್ತಾನೆ ನಿಜ, ಆದರೆ ಮಹಿಳೆಗೆ ಹೋಲಿಸಿದರೆ ಅದರ ಪರಿಮಾಣ ಬಹಳ ಕಡಿಮೆಯೇ. ಈ ನೆಲೆಯಲ್ಲಿ ಹೆಣ್ಣಿಗೆ ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳೇ ಮಾದರಿಗಳಾಗಿವೆ. ಬಹಳ ಮುಖ್ಯವಾದ ಸಂಗತಿಯೆಂದರೆ ಇಲ್ಲಿನ ಕತೆಗಳಲ್ಲಿ ಬರುವ ಹೆಣ್ಣಿನ ತ್ಯಾಗ ಮೂರ್ಖತನವಾಗುವುದಿಲ್ಲ. ಬದಲಾಗಿ 'ಬಿಟ್ಟುಕೊಡುವ' ಸುಖ ವನ್ನು ಇವು ಅನುಭವಿಸುತ್ತವೆ. ಬಿಟ್ಟುಕೊಡುವುದು ಪ್ರೀತಿಯ ಗುಣ, ಕೊಡದಿರುವ ಹಟ ಅಹಂಕಾರದ ಸ್ವರೂಪ. ಇಂದಿನ ಸ್ಪರ್ಧಾತ್ಮಕ ಆಧುನಿಕ ಜಗತ್ತಿನಲ್ಲಿ ಈ ಮೌಲ್ಯಗಳು ಚಲಾವಣೆಗೆ ಬರದ ನಾಣ್ಯಗಳು, ಹಾಸ್ಯಾಸ್ಪದವಾದವುಗಳು ಎಂಬುದನ್ನೂ ಈ ಪಾತ್ರಗಳು ಎತ್ತಿಹಿಡಿಯುತ್ತವೆ.

'ಸ್ವವಶ–ಪರವಶ' ಈ ಸಂಕಲನದ ಅತ್ಯತ್ತಮವಾದ ಕತೆ. ಒಂದು ಸಮಸ್ಯೆಯ ಎರಡೂ ಮಗ್ಗಲುಗಳನ್ನು ಲೇಖಕಿ ತೆರೆದಿಡುವುದು ಸ್ವಾಗತಾರ್ಹ. ಹಿಂದೂ ಮುಸ್ಲಿಂ ದಂಪತಿಗಳಿಗೆ ಹುಟ್ಟಿದ ಮಗಳು, ಮುಸ್ಲಿಂ ಹುಡುಗನ ಜೊತೆ ಮದುವೆಯಾಗುವೆನೆಂದಾಗ, ಪೀಳಿಗೆಯ ಅಂತರದಲ್ಲಿ, ಬದಲಾದ ಕಾಲದ ಸಂದರ್ಭದಲ್ಲಿ ಅದನ್ನು ಜವಾಬ್ದಾರಿ ಯುತವಾಗಿ ಅರ್ಥೈಸುವುದು ಲೇಖಕಿಯ ಪ್ರಬುದ್ಧ ನಿಲುವಿಗೆ ಸಾಕ್ಷಿಯಾಗಿದೆ. ಅಲ್ಲದೆ, ಸಮಾಜದ ಆರೋಗ್ಯಕ್ಕೂ ಹಿತವಾಗಿದೆ.

ದಾಂಪತ್ಯದಲ್ಲಿ ಕೊನೆಗೂ ಬೇಕಾಗಿರುವುದು, ಲೇಖಕಿಯೇ ಹೇಳುವಂತೆ, ಸೌಹಾರ್ದ, ಪ್ರೀತಿ, ಗೌರವ, ಸಹಕಾರದಂತಹ ಗುಣಗಳು. ಇಂತಹ ಮೌಲ್ಯಗಳು ಸಮಾಜದ ಆರೋಗ್ಯಕರ ಬೆಳವಣಿಗೆಗೆ ಅವಶ್ಯಕವಾದವು ಎಂಬುದರಲ್ಲಿ ಎರಡು ಮಾತೇ ಇಲ್ಲ. ಆದರೆ ಇವು ಒನ್ ವೇ ಟ್ರಾಫಿಕ್ ಆಗಬಾರದಷ್ಟೇ. 'ಸ್ವ–ವಶ'ದ ನಾಯಕಿ ಗಂಡನಿಗೆ ಬಾತ್ ರೂಮಿನಲ್ಲಿ ಟವಲ್, ಅಂಡರ್ ವೇರ್‌ಗಳನ್ನು ಇಡುವುದು ಇತ್ಯಾದಿ ಅಭ್ಯಾಸಗಳಿಗೆ ಒಗ್ಗಿಹೋದವಳು. ಅದನ್ನು ಅವಳು ಬದಲಾಯಿಸುವುದಿಲ್ಲ. ಆದರೆ ಗಂಡನ ಕುಡಿತದ ಪಾರ್ಟಿಗಳಿಂದ ತಾನು ನಿರ್ಲಕ್ಷ್ಯಕ್ಕೆ ಒಳಗಾಗುತ್ತಿರುವ ಅರಿವು ಅವಳಿಗಿದೆ. 'ಸುಧಾಳಂತೆ ಸಿಡುಕಿ ನಿಲ್ಲುವ ಶಕ್ತಿಯಿಲ್ಲ, ಒಪ್ಪಿಕೊಂಡು ಬದುಕುವುದು ಸಾಧ್ಯವಿಲ್ಲ' ಎನ್ನುವ ನಿರೂಪಕಿಯ ಮಾತುಗಳಲ್ಲಿ, ಒಪ್ಪಿಕೊಂಡು ಬದುಕುವುದರ ಲ್ಲಾಗಲೀ, ಸಿಡಿದು ನಿಲ್ಲುವುದರಲ್ಲಾಗಲೀ ಹೆಣ್ಣಿಗೆ ಸ್ಪಷ್ಟ ಅರಿವಿರಬೇಕು ಎನ್ನುವುದು ವ್ಯಕ್ತವಾಗುತ್ತದೆ. ಇದು ಹೆಣ್ಣಿನ ಸ್ವ–ಪ್ರಜ್ಞೆಗೆ ಹಿಡಿದ ಕನ್ನಡಿಯಾಗಿದೆ. ಮಾಲತಿ ನಾಡಿಗ್‌ರ ಇಂತಹ ವಿಚಾರಗಳು ಮುಂದಿನ ಕತೆಗಳಲ್ಲಿ ಇನ್ನಷ್ಟು ಕಲಾತ್ಮಕತೆಯನ್ನು ರೂಪಿಸಿಕೊಳ್ಳಲಿ. ❑



# ವಸಾಹತೋತ್ತರ ಕಾಲದ ಮಹಿಳಾ ಸಂವೇದನೆ ಹಾಗೂ ಶಶಿಕಲಾ ವೀರಯ್ಯಸ್ವಾಮಿಯವರ 'ನನ್ನ ಅವತಾರ'

■ ಎಂ.ಡಿ. ಒಕ್ಕುಂದ

ವಸಾಹತುಕಾಲ ಮಹಿಳೆ, ದಲಿತರಂತಹ ದಮನಿತ ಸಮುದಾಯಗಳಿಗೆ ಕಿಂಚಿತ್ ಆತ್ಮವಿಶ್ವಾಸವನ್ನು ಒದಗಿಸಿತ್ತು ಎನ್ನುವುದು ಭಾರತದಂತಹ ದೇಶದ ಚಾರಿತ್ರಿಕ ವ್ಯಂಗ್ಯ. ಹೀಗೆ ತೆರೆದುಕೊಂಡ ಅವಕಾಶಗಳನ್ನು ಮಹಿಳೆ ಋಣಕಲ್ಪನೆಯಲ್ಲಿಯೇ ಸ್ವೀಕರಿಸಬೇಕಾಯಿತು. ಸ್ವಾತಂತ್ರ ಚಳುವಳಿಯ ಕಾಲದ ಪುನರುತ್ಥಾನವಾದಿ ಚಳುವಳಿಗಳು ಈಗಾಗಲೇ ಮಹಿಳಾ ಪ್ರಜ್ಞೆಯಲ್ಲಿ ಕೀಳರಿಮೆಯನ್ನು ಆನುಷಂಗಿಕ ಪ್ರಜ್ಞೆಯನ್ನು ಬೆಳೆಸಿದ್ದವು. ಆಧುನಿಕತೆ ಪರಂಪರಾಗತ ಚಿಂತನೆಗಳಿಗೆ ಕೊಡಮಾಡುವ ಹೊಸ ಹೊಳಪು ಎನ್ನುವಂತಿತ್ತು. ಭಾರತದ ಚರಿತ್ರೆಯಲ್ಲಿ ಮಹಿಳೆಯರು ಸಾಮೂಹಿಕವಾಗಿ ಪಾಲುದಾರರಾದ ಸ್ವಾತಂತ್ರ್ಯ ಚಳುವಳಿಗಳ ಸಂಧಿಕಾಲವಿದು. ಸ್ವಾತಂತ್ರ್ಯದ ಸಂಭ್ರಮವನ್ನು ಅನುಭವಿಸುವುದಕ್ಕಿಂತ ವಿಭಜನೆಯ ಕರಾಳ ಅಧ್ಯಾಯಕ್ಕೆ ಸಾಕ್ಷೀಪ್ರಜ್ಞೆಯ ಘಾಸಿತನವನ್ನು ಅನುಭವಿಸಬೇಕಾಯಿತು. ಮಾರ್ಗದರ್ಶಕ ಸ್ಥಿತಿಯಲ್ಲಿಯೇ ಹೊಸಲೋಕವನ್ನು ಕಂಡವರಿಗೆ ಗಾಂಧೀಜಿಯ ಕಗ್ಗೊಲೆ, ಕೋಮು ಹಿಂಸೆಗಳ ವರ್ತಮಾನದಲ್ಲಿ ದಿಗ್ಮೂಢ ಸ್ಥಿತಿ ಉಂಟಾಯಿತು. ಈ ಸ್ಥಿತಿಯ ಲಾಭವನ್ನು ಪಿತೃಪ್ರಧಾನ ಯಾಜಮಾನ್ಯ ವ್ಯವಸ್ಥೆ ಮತ್ತು ಅಲ್ಲಿ ಕ್ರಿಯಾಶೀಲವಾಗಿದ್ದ ಧರ್ಮಗಳು ಪಡೆದುಕೊಂಡವು. ಹೆಣ್ಣು ಆಧುನಿಕತೆಯ ಸಮಾಜದಲ್ಲಿಯೂ ವ್ಯಕ್ತಿಯಾಗಿ ಪ್ರತಿನಿಧೀಕರಣಗೊಳ್ಳದೆ, ಆಸ್ತಿಯಾಗಿ ಪ್ರತಿನಿಧೀಕರಣಗೊಳ್ಳುವಂತಾಯಿತು.

ಸಮಾಜದ ಆಲೋಚನಾ ವಿಧಾನದಲ್ಲಿ ಮೂಲಭೂತ ಪಲ್ಲಟ ಸಂಭವಿಸದ ಕಾರಣದಿಂದ ಶಿಕ್ಷಣ, ಉದ್ಯೋಗಾವಕಾಶಗಳು ಕೂಡ 'ಒಳ್ಳೆಯ ಹೆಂಡತಿಯಾಗಲು ಮತ್ತು ಒಳ್ಳೆಯ ತಾಯಂದಿರಾಗಲು' (ಮುಂಬೈ ಗೆಜೆಟ್) ಎಂಬ ನಿಲುವಿನಿಂದ ಆಚೆ ಬರಲಿಲ್ಲ. ಹೆಣ್ಣಿನ ಬದುಕು 'ಪೂರಕ ವಿಧಾನ'ವಾಗಿ ಅಧಿಕೃತಗೊಳ್ಳತೊಡಗಿತು. ಅವಲಂಬಿತ ಪ್ರಜ್ಞೆ ಸಾಮಾಜಿಕ ರಾಜಕೀಯ ವಿದ್ಯಮಾನಗಳಲ್ಲಿ ಸ್ವತಂತ್ರ ತೀರ್ಮಾನ ತೆಗೆದುಕೊಳ್ಳುವ ಸಾಧ್ಯತೆಯನ್ನು ಕಳೆದುಕೊಂಡಿತ್ತು. ಸಂವಿಧಾನದತ್ತವಾದ ಹಕ್ಕು ಬಾಧ್ಯತೆಗಳನ್ನು ಸರಿಯಾದ ರೀತಿಯಲ್ಲಿ ಅನ್ವಯಗೊಳಿಸುವ ಕಾಳಜಿ ಉಳಿಯಲಿಲ್ಲ. ಇದರಿಂದಾಗಿ ಮಹಿಳಾ ಸಮುದಾಯ ದೇಶದ ಸಂವಿಧಾನ, ಕಾನೂನುವ್ಯವಸ್ಥೆ, ಅಧಿಕಾರ ಕೇಂದ್ರಗಳಿಂದ ದೂರವೇ ಉಳಿಯಿತು.

ಇದು ಅತ್ಯಂತ ಸಂಕೀರ್ಣವೂ ಸಂಕಟವೂ ಆಗಿದ್ದ ಕಾಲ. ಮಹಿಳಾ ಶಿಕ್ಷಣ ಫಲಾನುಭವಿಗಳು ಕೂಡ ಮೇಲ್ಜಾತಿ ಮೇಲ್ವರ್ಗದವರಾಗಿದ್ದರು. ಕೆಳಸಮುದಾಯಗಳಿಗೆ ಈ ಸವಲತ್ತು ದೊಡ್ಡ ಪ್ರಮಾಣದಲ್ಲಿ ತೆರೆದುಕೊಳ್ಳಲಿಲ್ಲ. ಮಹಿಳಾ ಸಂವೇದನೆ ಹಲವು ತುಂಡುಗಳಾಗಿ ಒಡೆದುಹೋಗಲಾರಂಭಿಸಿತ್ತು. ಇಂತಹ ಸಂದರ್ಭದಲ್ಲಿ 'ಸಂವೇದನೆಯ' ಸಂಕಥನವನ್ನು ರೂಪಿಸಿದ ಹಿರಿಮೆ ಸ್ತ್ರೀವಾದಕ್ಕೆ ಸಲ್ಲುತ್ತದೆ. ಬದುಕನ್ನು ಅಂತೆಯೇ ಸಾಹಿತ್ಯವನ್ನು ನೋಡುವ ತಿಳಿಯುವ ಅರಿವಿನ ಅನುಭೂತಿಯಾಗಿ ಮಹಿಳಾ ಪ್ರಜ್ಞೆ ಸ್ತ್ರೀವಾದವನ್ನು ಸ್ವೀಕರಿಸಿತು. 'ಹೆಣ್ಣು ಕೂಡ ಮನುಷ್ಯಳೇ', 'ಅವಳ ದೇಹದ ಮೇಲೆ ಅವಳ ಅಧಿಕಾರ' – ಇಂತಹ ಚಿಂತನೆಗಳ ಸಣ್ಣ ಸಣ್ಣ ಬೆಳಕಿನ ಬೀಜಗಳು ಈ ನೆಲದ ತಿಳಿವಿಗೆ ಅನುಗುಣವಾಗಿ ಶೋಧನೆಗೂ ಸ್ವೀಕಾರಕ್ಕೂ ಒಳಗಾದವು.

ಸಾಹಿತ್ಯದಲ್ಲಿ ನವ್ಯದ ಕಲಾತ್ಮಕತೆ, ಬದುಕನ್ನು ಕುರಿತ ಸಾಂಪ್ರದಾಯಿಕ ನಿಲುವುಗಳಲ್ಲಿ ವ್ಯವಹರಿಸುತ್ತಿದ್ದ ಮಹಿಳಾ ಅಭಿವ್ಯಕ್ತಿಗೆ ತೊಡಕಾದಾಗ ಅದು ಜನಪ್ರಿಯ ಗದ್ಯಮಾದರಿಗಳ ಕಡೆ ಹೊರಳಿದ್ದೂ ಇದೆ. ಎಂಬತ್ತರ ದಶಕದ ದಲಿತ–ಬಂಡಾಯ ಸಾಹಿತ್ಯ ಚಳುವಳಿಯ ಸೈದ್ಧಾಂತಿಕತೆಯು ಮಹಿಳೆಯ ಒಳಗುದಿಗೆ ಮುಕ್ತ ಅವಕಾಶವನ್ನು ಒದಗಿಸಿತು. ಶೋಷಿತ ಬದುಕೇ ಮನುಷ್ಯ ಸಂವೇದನೆಯನ್ನು ಬೆಸೆಯುವ ಮಾಧ್ಯಮವಾಯಿತು. ವೈಚಾರಿಕ ಸೈದ್ಧಾಂತಿಕ ಅರಿವು ಮತ್ತು ಸ್ತ್ರೀವಾದದ ಸೂಕ್ಷ್ಮತೆಗಳು ಈ ಕಾಲದ ಮಹಿಳಾ ಬರವಣಿಗೆಯ ಮೇಲೆ ಪ್ರಭಾವ ಬೀರಿದವು.

ಎಂಬತ್ತರ ದಶಕ ಮಹಿಳೆಯ ಸಾಮುದಾಯಿಕ ಅಭಿವ್ಯಕ್ತಿಗೆ ಚಾರಿತ್ರಿಕ ದಾಖಲೆಯಾಯಿತು. ಬಹುತೇಕ ಬರವಣಿಗೆಗಳು ಹೆಣ್ಣು ಅನುಭವಿಸುವ ಯಾತನೆಯ ವಿವಿಧ ಪದರಗಳನ್ನು ಕಾಣಿಸುವ ವಿಧಾನದಲ್ಲಿ ಬಂದವು. ಜೈವಿಕ ಅವಸ್ಥೆಗಳಲ್ಲಿಯ ಅವಳ ಮನಸ್ಥಿತಿಯ ಪ್ರಾಮಾಣಿಕ ದಾಖಲೆ, ಕೌಟುಂಬಿಕ ಪರಿಧಿಯ ಸಂಕಟಗಳು, ಹೊಸದಾಗಿ ತೆರೆದುಕೊಳ್ಳುತ್ತಿದ್ದ ಸಾಮಾಜಿಕ ಬದುಕಿನ ವೈವಿಧ್ಯಮಯ ಅನುಭವಗಳು ಕಂಡು ಬಂದವು. ಸಮಾಜವನ್ನು ಹೆಣ್ಣಾಗಿಯೇ ಪ್ರವೇಶಿಸಬೇಕಾಗಿದ್ದರಿಂದ ಹೆಣ್ಣಿನ ನೆಲೆಯಿಂದ ಸಮಾಜದ ವ್ಯಾಖ್ಯಾನ ಮತ್ತು ನಿರ್ವಚನಗಳು ಅನಿವಾರ್ಯವಾದವು. ಹೆಣ್ಣು ಮಹಿಳೆಯಾಗಿ ಸಾಮಾಜಿಕ ಐಡೆಂಟಿಟಿಯನ್ನು ಪಡೆದುಕೊಳ್ಳುತ್ತಿದ್ದಂತೆ ಸಮುದಾಯವನ್ನು ಸಂಭಾಳಿಸುವ, ತಿದ್ದುವ, ಪರವಾಗಿ ಮಾತನಾಡುವ ಜವಾಬ್ದಾರಿಕೆಯೂ ಒದಗಿತು. 'ನಾನು' ಎನ್ನುವದು 'ನಾವು' ಎಂದು ಸಂವಹನಗೊಳ್ಳುತ್ತಿತ್ತು. ವೈಯಕ್ತಿಕ ಅನುಭವಗಳು ಸಾಮಾಜಿಕವಾಗಿ ಸಂವಹನಗೊಂಡವು. ಪರಂಪರೆಯ ಪುನರ್‌ನಿರ್ವಚನ ನಡೆಯಿತು. ಶಾಸ್ತ್ರಗಳ, ಕಾವ್ಯಗಳ 'ಮಹಿಳಾ ಓದು' ಎಂಬ ಅಧ್ಯಯನ ವಿಧಾನಗಳು ತೆರೆದುಕೊಂಡವು.

ಹೀಗೆ ಮಹಿಳಾ ಸಂವೇದನೆಯ ಅಧಿಕೃತ ಆರಂಭವು ಹಿಂಸೆಯ ವಿರೋಧವೂ ಧರ್ಮದ ವಿರೋಧವೂ ಆಗಬೇಕಾದ ಅನಿವಾರ್ಯತೆಯಿತ್ತು. ಹೀಗಾಗಿ ಪರಂಪರೆಯನ್ನು ಮರುವಿಶ್ಲೇಷಣೆಗೆ ಒಳಪಡಿಸಬೇಕಾಯಿತು. ವರ್ತಮಾನದ ಸಾಮಾಜಿಕ ಬದುಕಿಗೆ ಗೈರುಹಾಜರಾಗಬಾರದೆನ್ನುವ ಒತ್ತಡ ಆರಂಭವಾಯಿತು. ಇದು ಸಮಕಾಲೀನ ರಾಜಕೀಯ ಐಡಿಯಾಲಜಿಯನ್ನು ಸಾಮಾಜಿಕ ತರ-ತಮಗಳನ್ನು ತಿಳಿಯುವ ಮತ್ತು ತಿಳಿಸುವ ಸಂಗತಿಯಾಯಿತು. ಈ ಕಾಲದ ಸ್ತ್ರೀ ಸಂವೇದನೆಯು ಅತ್ಯಂತ ಮುಖ್ಯವಾಗಿ 'ಸ್ತ್ರೀಲೋಕ' ದ ಸೂಕ್ಷ್ಮಾತಿಸೂಕ್ಷ್ಮತೆಯ ಕಡೆಗೆ ವಿಸ್ತರಿಸಿತು. ವರ್ತಮಾನವನ್ನು ವಿಶ್ಲೇಷಿಸುವ ಶಕ್ತಿಸಂಚಯನ ನಡೆಯಿತು. ಹೀಗಾಗಿ ಮತೀಯವಾದ, ಕೋಮುವಾದ, ಧರ್ಮ ಮತ್ತು ಧರ್ಮದ ಪರಿಕರಗಳನ್ನು ಶೋಧಿಸುವಿಕೆ ಎಂಭತ್ತರ ದಶಕದ ಮಹಿಳಾ ಸಾಹಿತ್ಯದ ಮುಖ್ಯ ಲಕ್ಷಣವಾಯಿತು. ಮಹಿಳಾ ಅಭಿವ್ಯಕ್ತಿಯ ಕಾಲ, ಸಾಹಿತ್ಯದ ಒಟ್ಟೂ ಧೋರಣೆಯಲ್ಲಿ ಮಹಿಳಾ ಚಿಂತನೆ ಅರಗಿಕೊಂಡ ಕಾಲವೂ ಹೌದು. ಇದರಿಂದಾಗಿ ಮಹಿಳಾ ಸಂವೇದನೆಗೆ ವಿಶಾಲವೂ ಆಳವೂ ಆದ ಪರಿಪ್ರೇಕ್ಷ್ಯ ಒದಗಿತು. ಆದರೆ ಸಾಮಾಜಿಕ ದೃಷ್ಟಿಕೋನದ ಸೆನ್ಸಾರ್‌ನಿಂದಾಗಿ ಅಂತರ್‌ಪಠ್ಯ ಬಹಿರ್‌ಪಠ್ಯಗಳಲ್ಲಿ ಹೊಂದಾಣಿಕೆ ಸಾಧಿಸಲು ಹೆಣಗುತ್ತಿತ್ತು. ಪರಂಪರಾಗತವಾಗಿ ಹೊರಿಸಿದ ಗುರುತುಗಳನ್ನು ಕಳಚಿಕೊಂಡು ನಿಜ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕಿತ್ತು.

ಹಾಗೆಯೇ ವಿಭಿನ್ನ ಸಂವೇದನೆಯನ್ನು ಸಿದ್ಧ ಭಾಷೆಯಲ್ಲಿ ವ್ಯವಹರಿಸುವ ಸಂದಿಗ್ಧತೆಗೂ ಎದುರಾಯಿತು. ಅನುಭವಕ್ಕೆ ಭಾಷೆಯನ್ನು ರೂಪಿಸಿಕೊಳ್ಳುವ, ಪಿತೃವ್ಯವಸ್ಥೆಯ ಅರ್ಥವಲಯವನ್ನು ಹೊಂದಿದ್ದ ಭಾಷೆಯನ್ನು ತನಗೆ ದಕ್ಕಿಸಿಕೊಳ್ಳುವ ಸಾಹಿತ್ಯಿಕ ಅಡಚಣೆಗಳು ವ್ಯಕ್ತವಾಗಿವೆ. ಸ್ತ್ರೀ ಸಂವೇದನೆಯ ಪ್ರಜ್ಞಾಪೂರ್ವಕ ಪ್ರಯೋಗಶೀಲತೆಯ ಕಾಲವಿದು. ಈ ಹಿನ್ನೆಲೆಯಲ್ಲಿ ಇಲ್ಲಿ ಶಶಿಕಲಾ ವೀರಯ್ಯಸ್ವಾಮಿ ಅವರ ಕವಿತೆಯನ್ನು ಗಮನಿಸಲಾಗಿದೆ.

**ಶಶಿಕಲಾ ವೀರಯ್ಯಸ್ವಾಮಿಯವರ 'ನನ್ನ ಅವತಾರ'**

ಕಳೆದ ಮೂವತ್ತು ವರ್ಷಗಳಿಂದ ಕಾವ್ಯರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಶಶಿಕಲಾ ವೀರಯ್ಯಸ್ವಾಮಿ ಕನ್ನಡದ ವಿಶಿಷ್ಟ ಸ್ತ್ರೀ ಧ್ವನಿ. ಎಪ್ಪತ್ತರ ದಶಕದ ಮಹಿಳೆಗೆ ಬರವಣಿಗೆ ಏಕಕಾಲಕ್ಕೆ ಬಿಡುಗಡೆಯೂ ಮುಜುಗರವೂ ಆಗಿದ್ದ ಕಾಲ. ಪುರುಷ ಪ್ರಧಾನ ಚಿಂತನೆಗಳ ಕಲ್ಪಿತಗಳಾಚೆ ತನ್ನನ್ನು ಸ್ಪಷ್ಟೀಕರಿಸುವುದು ಆಂತರಿಕ ವಾಗಿಯೂ ಕಠಿಣವಾಗಿದ್ದ ಸ್ಥಿತಿ ಒಂದುಕಡೆ; ಈ ದಿಗ್ಬಂಧನವನ್ನು ಸಡಿಲಗೊಳಿಸಿಕೊಳ್ಳದಿದ್ದರೆ ಇನ್ನೂ ತಳಕ್ಕಿಳಿದು ಹೋಗುತ್ತೇನೆಂಬ ಅರಿವಿನ ದಿಗಿಲು ಮತ್ತೊಂದೆಡೆ, ಇಂತಹ ತಳಮಳದಲ್ಲಿ ಮಹಿಳಾ ಅಭಿವ್ಯಕ್ತಿ ರೂಪುತಾಳಿತು. ಹಾಗಾಗಿ ಮಹಿಳಾ ಬದುಕಿನ ವಿವಿಧ ನೆಲೆಗಳು ಸಾಹಿತ್ಯಕವಾಗಿ ದಾಖಲಾದವು. ಸಾಮಾಜಿಕ ಬದುಕನ್ನು ಮಹಿಳೆ ಎಂಬ ಜೈವಿಕ ಐಡೆಂಟಿಟಿಯಲ್ಲಿಯೇ ಪ್ರವೇಶಿಸಬೇಕಾಗಿದ್ದ ರಿಂದ, ಸಮಾಜದ ವಾಸ್ತವಗಳನ್ನು ಮಹಿಳೆಯಾಗಿ ಗ್ರಹಿಸುವ ಅನಿವಾರ್ಯತೆಯಿತ್ತು. ಈ ಎರಡು ತಡೆಗಳನ್ನು ದಾಟಿ ವ್ಯಕ್ತಿಪ್ರಜ್ಞೆಯಿಂದ ಸಮಕಾಲೀನ ಸಂದರ್ಭವನ್ನು ವಿಶ್ಲೇಷಿಸುವುದು ಕಠಿಣವಾಗಿತ್ತು. ಇಂತಹ ಸಂಧಿಕಾಲದಲ್ಲಿ ಸ್ತ್ರೀವಾದದ ಖಚಿತತೆ ಮತ್ತು ಬಂಡಾಯ ಸಾಹಿತ್ಯದ ವಿಶಾಲ ಭೂಮಿಕೆ ಮಹಿಳಾ ಸಂವೇದನೆಯು ಮುಂಚಾಚಿಕೊಳ್ಳಲು ಕಾರಣವಾಯಿತು.

'ಪ್ರಶ್ನೆ' ಸಂಕಲನದಿಂದ 'ನನ್ನ ಅವತಾರ' ಎಂಬ ಕವಿತೆಯನ್ನು ಇಲ್ಲಿಯ ಅಧ್ಯಯನಕ್ಕೆ ತೆಗೆದುಕೊಳ್ಳಲಾಗಿದೆ. ಈ ಕವಿತೆಯು ಪುರಾಣಭಂಜಕ ಪ್ರತಿಮಾ ನಿರೂಪಣೆಯಲ್ಲಿದೆ. ಕನ್ನಡದ ಈ ಮಾದರಿಯ ಕವಿತೆಗಳಲ್ಲಿ ಮುಖ್ಯವಾಗಿದೆ. ಧರ್ಮದ ದುರುಳತನವನ್ನು ಪ್ರಶ್ನಿಸುತ್ತದೆ. ಪುರುಷ ಪ್ರಧಾನ ಧಾರ್ಮಿಕ ಯಜಮಾನಿಕೆಯನ್ನು ವಿರೋಧಿಸುತ್ತದೆ. ಇಂತಹ ವಿರೋಧ ಧರ್ಮವು ಕೂಡಿಕೊಂಡಿರುವ ಎಲ್ಲ ಜೀವವಿರೋಧಿ ಸಂಗತಿಗಳಿಂದ ಬಿಡುಗಡೆಗೊಳ್ಳುವುದಾಗಿದೆ.

**ಪುರಾಣ ಭಂಜಕತೆ**

ಈ ಕವಿತೆ ಶ್ರೀಕೃಷ್ಣನನ್ನು ಆ ಮೂಲಕ ವೈದಿಕ ಚಿಂತನೆಗಳನ್ನು, ಭಗವದ್ಗೀತೆಯ ಹಿಂಸಾಮೋಹವನ್ನು ಸ್ವಾರ್ಥವನ್ನು ವಿರೋಧಿಸುತ್ತದೆ. 'ಮತ್ತೆ ಬರ್ತೀನಂತ ಕೈಕೊಟ್ಟು ಹೋದೆಲ್ಲೋ ಕಿಟ್ಟೂ' ಎಂಬ ಆರಂಭವೇ 'ಧರ್ಮ ಸಂಸ್ಥಾಪನಾರ್ಥಂ ಸಂಭವಾಮಿ ಯುಗೇ ಯುಗೇ' ಎಂಬ ಗೀತೋಪದೇಶವನ್ನು ಪ್ರಶ್ನಿಸುತ್ತದೆ. ಉಡುಪಿಯ ಶ್ರೀಕೃಷ್ಣ ಮಠದಲ್ಲಿ ಕೃಷ್ಣನಿಗೆ ಬಂಗಾರದಿಂದ ಅಲಂಕರಿಸಿ ಕ್ಷೀರಾಭಿಷೇಕ ನಡೆಸಿದ ಪ್ರಸಂಗ ದಿಂದ ಪ್ರೇರಣೆಗೊಂಡು ಬರೆದ ಕವಿತೆಯಿದು. ದೈವತ್ವದ ಕುರಿತ ಕಲ್ಪಿತಗಳನ್ನೂ ಸಾಮಾಜಿಕ ವಾಸ್ತವಗಳನ್ನೂ ಮುಖಾಮುಖಿ ಗೊಳಿಸುತ್ತದೆ. ಹನಿ ಹಾಲಿಲ್ಲದೆ ಸತ್ತ ಮಕ್ಕಳ ಹೆಣದ ಮೇಲೆ ನಿಂತು ಕ್ಷೀರಾಭಿಷೇಕ ಬೇಡುವ ನಾಚಿಕೆಗೇಡಿಯಾಗಿ ಮೂರ್ತಿ ಭಂಜಕತ್ವ ನಡೆಯುತ್ತದೆ. ಈ ಜನರ ಹಸಿವು, ಸಂಕಟ, ಅನ್ಯಾಯಗಳಿಗೆ ಮಿಡಿಯದೆ ಕಲ್ಲಾಗಿರುವ ಕೃಷ್ಣನನ್ನು ಕವಿತೆ ನೇರವಾಗಿಯೇ ಪ್ರಶ್ನಿಸುತ್ತ ಹೋಗುತ್ತದೆ.

ದೈವವನ್ನು ಪ್ರಶ್ನಿಸುವುದೆಂದರೆ, ದೇವರನ್ನು ಆಸ್ತಿಯಾಗಿಸಿಕೊಂಡು ಸಂಪತ್ತಿನ ಕ್ರೋಢೀಕರಣ ನಡೆಸಿರುವ ಪುರೋಹಿತಶಾಹಿ ವ್ಯವಸ್ಥೆಯನ್ನು ಜಾಲಾಡುವುದೇ ಆಗಿದೆ. ಯಾರು ತಮ್ಮನ್ನು ಶುದ್ಧರು, ಶಾಖಾಹಾರಿಗಳು, ಭೂಸುರರು ಎಂದು ಕರೆದುಕೊಳ್ಳುತ್ತಿದ್ದರೋ ಅವರನ್ನು ಕವಿತೆ 'ಹೊಲಸ ತಿನ್ನೋ ಹೀನರು' ಎನ್ನುತ್ತದೆ. ಆ ಮೂಲಕ ಬಹಿರಂಗಕ್ಕಿಂತ ಅಂತರಂಗದ ಶುದ್ಧತೆಗೆ ಮಹತ್ವ ಕೊಟ್ಟ ವಚನಕಾರರ ಚಿಂತನೆ ಯೊಂದಿಗೆ ಸಂಬಂಧ ಸ್ಥಾಪಿಸಿಕೊಳ್ಳುತ್ತದೆ. ಹೊಲೆತನವನ್ನು ವ್ಯಾಖ್ಯಾನಿಸಿದ ಕನಕದಾಸರ ಕೀರ್ತನೆಯನ್ನು ನೆನಪಿಸುತ್ತದೆ. ಆ ಮೂಲಕ ವೈದಿಕಶಾಹಿಯ ಕಲ್ಪಿತಗಳನ್ನು ಭ್ರಮೆಗಳನ್ನು ಛಿದ್ರಗೊಳಿಸುತ್ತದೆ. ಇಂಥವರ ಕೈಕೂಸಿನಂತೆ ಅಸಹಾಯಕನಾಗಿಬಿಟ್ಟ ದೈವತ್ವದ ಬಗ್ಗೆ ಮರುಕವಿದೆ. ಸ್ವರಕ್ಷಣೆಯನ್ನೇ ಮಾಡಿಕೊಳ್ಳಲಾಗದವನ ಬಗ್ಗೆ ವಿಷಾದವಿದೆ. 'ದುಷ್ಟನಿಗ್ರಹ, ಶಿಷ್ಟಪರಿಪಾಲನ' ಎಂಬ ಶಕ್ತಿ ಗೋಚರ ವಾಗುತ್ತಿಲ್ಲದ ವರ್ತಮಾನದಲ್ಲಿ ಪೌರಾಣಿಕ ಕಥನಗಳನ್ನು ನಂಬುವುದು ಸಾಧ್ಯವಿಲ್ಲದ ಒತ್ತಡವಿದೆ. 'ಸಮಾಜ ನಿಷಿದ್ಧವೆಂದು ತಿಳಿದಿದ್ದರ ಬಗ್ಗೆ ಮಾತನಾಡುವುದು ಗಂಡಸಿಗೇ ಕಷ್ಟವೆನ್ನಿಸುವಾಗ ಹೆಣ್ಣಿಗೆ ಇನ್ನೂ ಹೆಚ್ಚಿನ ಸವಾಲಾಗಿ ಪರಿಣಮಿಸಬಹುದು. ತನ್ನ ಸ್ವಭಾವಗಳನ್ನು ಅಗತ್ಯಗಳನ್ನು ಗಂಡು ಸಮಾಜ ಹೇಗೆ ಭಾವಿಸಿ ಕೊಂಡಿದೆಯೋ ಅದು ತನ್ನ ನಿಜ ಕೂಡ ಎನ್ನುವಷ್ಟು ಹೊರಗಿನ ಧೋರಣೆಯನ್ನು ಒಳಪಡಿಸಿಕೊಂಡ ಹೆಣ್ಣು ನಮ್ಮ ಸಮಾಜದಲ್ಲಿ ಅತ್ಯಂತ ನಿಷ್ಠುರಳಾದ ಪುರಾಣಭಂಜಕಳಾಗಬೇಕಿದೆ. ಈ ಪುರಾಣ ಭಂಜನದ ಮೂಲಕ ಅವಳು ಬಿಡುಗಡೆ ಪಡೆಯಬೇಕಿದೆ.'

ಇಂತಹ ಒತ್ತಡದಿಂದ ಮಹಿಳಾ ಸಾಹಿತ್ಯದಲ್ಲಿ ಪುರಾಣಭಂಜಕ ಪರಿಕಲ್ಪನೆ ಹೆಚ್ಚಾಗಿ ಕಾಣುತ್ತದೆ. ಇವು ವರ್ತಮಾನದ ಸಂಗತಿಗಳನ್ನು ವಿಶ್ಲೇಷಿಸುವ ಮಾಧ್ಯಮಗಳಾಗಿವೆ. ನಮ್ಮ ಸಂದರ್ಭದಲ್ಲಿ ಹಿಂದೂತ್ವವು ರಾಮಕಥೆಯನ್ನು ಕೋಮುವಾದ ಹರಡಲು ಕಾರಣವಾಗಿಸಿಕೊಂಡಿದೆ. ಕೃಷ್ಣತತ್ವವನ್ನು ಕ್ರಿಯಾವಿಧಾನ ವಾಗಿಸಿಕೊಂಡಿದೆ. ಇಸ್ಕಾನ್‌ದಂತಹ

ಕೃಷ್ಣಮಿಷನ್‌ಗಳ ಮೂಲಕ ಹಿಂದೂತ್ವದ ಪ್ರಬಲೀಕರಣವು ತೀಕ್ಷ್ಣವಾಗಿ ನಡೆಯುತ್ತಿದೆ. ಹಳ್ಳಿಹಳ್ಳಿಗಳನ್ನು ವ್ಯಾಪಿಸಿಕೊಂಡಿರುವ ಈ ಪಂಥದ ಅನುಯಾಯಿಗಳು ತುಂಬ ಸಹಜವಾಗಿಯೇ ಅನ್ಯಧರ್ಮೀಯರನ್ನು ಅಸಹನೆಯಿಂದ ಕಾಣುತ್ತಾರೆ. ಇನ್ನೊಂದೆಡೆ ಬಿಸಿಯೂಟದ ಗುತ್ತಿಗೆ ಪಡೆದ ಇಸ್ಕಾನ್ ಸಂಸ್ಥೆ ಸರ್ಕಾರಿ ಅನುದಾನದ ಕಲ್ಪನೆಯೂ ಬರದಂತೆ ದಾನದ ಸೋಗಿನಲ್ಲಿದೆ. ಬೆಂಗಳೂರಿನ ಹೊರವಲಯದಲ್ಲಿ ನೂರಾರು ಕೋಟಿ ಯೋಜನೆಯಲ್ಲಿ ಇಸ್ಕಾನ್ ಸಂಸ್ಥೆಯ ಧರ್ಮರಾಜಕಾರಣದ ಕೇಂದ್ರ ರೂಪುಗೊಳ್ಳುತ್ತಿದೆ. ಉಡುಪಿಯ ಅಷ್ಟಮಠದ ವಿಶ್ವೇಶ್ವರತೀರ್ಥ ಸ್ವಾಮಿಯಂಥವರು ರಾಜಕಾರಣವೆಂದರೆ ಮಠದ ಆಡಳಿತದ ಒಂದು ಭಾಗ ಎಂದು ಭ್ರಮಿಸಿ ನಡೆದುಕೊಳ್ಳುತ್ತಿದ್ದಾರೆ. ಕೃಷ್ಣತತ್ವವು ಮುಂಚೂಣಿಗೆ ಬರುವುದು ಎಂದರೆ 'ಚಾತುರ್ವರ್ಣ್ಯಂ ಮಯಾ ಸೃಷ್ಟ್ಯಂ' ಎಂಬ ಜಾತಿಭೇದವು ಜಾಗ್ರತವಾಗುವುದೇ ಆಗಿದೆ. 'ಚಾತುರ್ವರ್ಣ' ಎಂದರೆ ಊಳಿಗಮಾನ್ಯ ಕಾಲದ ಒಡೆದು ಆಳುವ ನೀತಿಯಾಗಿದೆ. ಆಧುನಿಕ ಕೋಮುವಾದವು ಇಂತಹ ಕಥನಗಳನ್ನು ಪುನರ್‌ಸೃಷ್ಟಿಸಿಕೊಂಡು ಆ ಮೌಲ್ಯಗಳನ್ನು ಪುನರ್‌ಪ್ರತಿಪಾದಿಸುವ ಹುನ್ನಾರದಲ್ಲಿರುತ್ತದೆ. ಮನು ವಿರಚಿತ ಕಾನೂನುಗಳು ಸರ್ವಕಾಲಕ್ಕೂ ಪ್ರಸ್ತುತವಾಗಿವೆ – ಎಂಬ ಆರೆಸ್ಸೆಸ್ ನಿಲುವು ಅವರ ಕನಸಿನ ಹಿಂದೂರಾಷ್ಟ್ರದಲ್ಲಿ ದಲಿತರ ಮತ್ತು ಮಹಿಳೆಯರ ಸ್ಥಾನಮಾನ ಏನಾಗುತ್ತದೆಂಬ ಸ್ಪಷ್ಟ ಚಿತ್ರಣ ನೀಡುತ್ತದೆ. ಹಿಂದೂತ್ವವು ಕೇವಲ ಧಾರ್ಮಿಕ ಅಥವಾ ಸಾಂಸ್ಕೃತಿಕ ಆಂದೋಲನ ವಲ್ಲ. ಅದೊಂದು ರಾಜಕೀಯ ಆಂದೋಲನ. ಇದು ಕೇವಲ ಮುಸ್ಲಿಮರನ್ನು ಸದೆಬಡಿಯುವ ಉದ್ದೇಶವನ್ನು ಹೊಂದಿಲ್ಲ. ಭಿನ್ನಾಭಿಪ್ರಾಯವನ್ನು ಹತ್ತಿಕ್ಕುವ ಮತ್ತು ಜನತೆಯ ಪ್ರತಿರೋಧದ ಚೈತನ್ಯವನ್ನೇ ಇಲ್ಲವಾಗಿಸುವ ದುಷ್ಟಶಕ್ತಿಯಾಗಿದೆ. ಇದನ್ನು ವಿರೋಧಿಸುವ ಪ್ರಯತ್ನ ಕೂಡ ಬಹುನೆಲೆಗಳಿಂದಲೇ ನಡೆಯ ಬೇಕಾಗುತ್ತದೆ. ಹಾಗಾಗಿ ಈ ಕವಿತೆ ಅಂತಹ ಬಹುಮುಖತೆಯ ಒಂದು ಭಾಗವಾಗಿ ಹಿಂದೂತ್ವ ಹರಡಿದ ಸುಳ್ಳುವದಂತಿಗಳನ್ನು ನಿರಾಕರಿಸುತ್ತದೆ.

ಎಂಬತ್ತರ ದಶಕದಲ್ಲಾಗಲೇ ಜಾತಿವಾದದ, ಕೋಮುವಾದದ ಹಿಂಸೆಯ ಪ್ರಕರಣಗಳು ಜರುಗಿದ್ದವು. ಅದನ್ನು ವಿರೋಧಿಸುವ ತೀಕ್ಷ್ಣ ಮಾದರಿಯಾಗಿ ಈ ಕವಿತೆ ದೈವತ್ವವನ್ನು ನಿರಾಕರಿಸುತ್ತದೆ. ಭಗವದ್ಗೀತೆಯ ಹಿನ್ನೆಲೆಯಲ್ಲಿ ಹಿಂದೂತ್ವವು ಪ್ರಚುರಪಡಿಸುತ್ತಿರುವ ಹಿಂಸಾವಾದ, ಧರ್ಮಯುದ್ಧ, ಶಿಷ್ಟರಕ್ಷಣ, ದುಷ್ಟಶಿಕ್ಷಣದಂತಹ ಪರಿಕಲ್ಪನೆಗಳನ್ನು ಅಮೂಲಾಗ್ರವಾಗಿ ವಿರೋಧಿಸುವ ವಿಧಾನವೂ ಆಗಿದೆ. ಕವಿತೆಯು ಆರ್ಥಿಕ, ಧಾರ್ಮಿಕ, ಸಾಮಾಜಿಕ ಅಸಮಾನ ಸ್ಥಿತಿಯನ್ನು ವಿರೋಧಿಸುವುದು ಹಿಂದೂತ್ವದ ಐಡಿಯಾಲಜಿಗೆ ವಿರುದ್ಧವೇ ಆಗಿದೆ. 'ಭೇದ ನೈಸರ್ಗಿಕ ನಿಯಮ. ಸಮಾಜಕ್ಕೆ ಸಮಾನತೆಯ ಅಗತ್ಯವಿಲ್ಲ. ಸೌಹಾರ್ದತೆಯಿದ್ದರೆ ಸಾಕು' ಎನ್ನುತ್ತ ಸೌಹಾರ್ದತೆಯನ್ನು ದಮನಕಾರೀ ತತ್ವವಾಗಿ ಬದಲಿಸಲು ಯತ್ನಿಸುವ ಗೋಲ್ವಾಲ್ಕರ್ ಅಭಿಪ್ರಾಯವನ್ನು ಗಮನಿಸಬೇಕು. ಇದು ಪ್ರಜಾಪ್ರಭುತ್ವದ ಸ್ಥಾಯೀಭಾವವಾದ ಸಮಾನತೆಯ ನಿಲುವನ್ನು ಭಂಡತನದಿಂದ ನಿರಾಕರಿಸುತ್ತದೆ.

ಶಶಿಕಲಾ ವೀರಯ್ಯಸ್ವಾಮಿಯವರ ಹಲವಾರು ಕವಿತೆಗಳು ಹಿಂದೂತ್ವದ ತಾತ್ವಿಕತೆಯ ಕೂಡ ಸಂಘರ್ಷವನ್ನು ವ್ಯಕ್ತಪಡಿಸುತ್ತವೆ. 'ಮನುಕುಲದ ಕತೆ' ಎಂಬ ಕವಿತೆ ನೆಲ–ಜಲ–ಮುಗಿಲುಗಳೇ ದೈವವಾದ ಅಂದಿನ ಸ್ಥಿತಿಯನ್ನು ನೆನಪಿಸಿಕೊಳ್ಳುತ್ತ, ಈಗ

ಕಲ್ಲುಗಳನು ಮಣ್ಣು ಇಟ್ಟಿಗೆಗಳನು
ಪೂಜಿಸತೊಡಗಿ, ದ್ವೇಷದ ವಿಷ ಹರಡಿ

ಎಂದು ವರ್ತಮಾನವನ್ನು ನಿರೂಪಿಸುತ್ತದೆ. 'ಆರ್ಯಾವರ್ತದ ನಾರೀರ ಕಣ್ಣೀರು ನೆತ್ತರಾಗಿ' ಹರಿದಿದ್ದನ್ನು ಗುರುತಿಸುವ ಮನಸ್ಸು ಜನಸಾಮಾನ್ಯರ ಬದುಕಿನ ತಾತ್ವಿಕತೆಯನ್ನು ಶೋಧಿಸಲೆತ್ನಿಸುತ್ತದೆ. ಗಾಂಧಿಯಾಗಲು ಸಾಧ್ಯವಿಲ್ಲದಷ್ಟು ಕೆಟ್ಟುಹೋಗಿದ್ದೇವೆ. ಆದರೆ ಕನಿಷ್ಠ 'ಗೋಡ್ಸೆನರ ಆಗದಿರೂನು' ಎಂದು ಸಾರುತ್ತದೆ. ಗೋಡ್ಸೆವಾದವು ಪ್ರಬಲವಾಗುತ್ತಿರುವ ದಿನಗಳಲ್ಲಿ ಅತ್ಯಂತ ನಿಖರವಾದ ಇಲ್ಲಿಯ ಕವಿತೆಗಳ ಅಭಿಮತವು ಮಹಿಳಾ ಸಂವೇದನೆಯು ಹಿಂದೂತ್ವದ ಸಿದ್ಧಾಂತವನ್ನು ವಿರೋಧಿಸುವ ಮಾದರಿಯಾಗಿದೆ. ಇಂತಹ ವಿರೋಧದ ಒಡಲಲ್ಲಿ ಸೌಹಾರ್ದತೆಯ ಸದಾಶಯವಿದೆ.

**ಅವತಾರದ ಕಲ್ಪನೆ**

ಪ್ರಸ್ತುತ ಪದ್ಯ ವೈದಿಕ ದಶಾವತಾರಗಳ ಕಲ್ಪನೆಯನ್ನು ವಿರೋಧಿಸುತ್ತದೆ. ವೈದಿಕ ಧರ್ಮ ಶತಮಾನಗಳಿಂದಲೂ ಹೆಣ್ಣಿನ ಬದುಕನ್ನು ಹೀನಾಯಗೊಳಿಸುತ್ತಲಿದೆ. 'ಹೆಣ್ಣಿನ ಸೀರಿ ಕದ್ದ ಹೇಸಿ' ದೇವರಾಗುವ ಪರಿಯೇ ವಿಚಿತ್ರವಾದದ್ದು. ಇಂತಹ ಕಥನಗಳ ಪವಿತ್ರೀಕರಣವು ಯಜಮಾನಿ ವ್ಯವಸ್ಥೆಯ ದೌರ್ಜನ್ಯಗಳಿಗೆ ಧಾರ್ಮಿಕ ರಕ್ಷಣೆಯನ್ನು ಒದಗಿಸುತ್ತ ಬಂದಿದೆ. ಇವುಗಳ ಒಳಹೂರಣಗಳೆಲ್ಲ ತಿಳಿದ ಮೇಲೂ ಒಪ್ಪಿಕೊಳ್ಳುವುದು ಆತ್ಮದ್ರೋಹವಾಗುತ್ತದೆ.

ಈ ಕವಿತೆ ಶ್ರೀಕೃಷ್ಣ ಚರಿತಾಮೃತವನ್ನು ಲೇವಡಿ ಮಾಡುತ್ತ, ಹೆಣ್ಣು ಧಾರ್ಮಿಕ ಒಡೆತನವನ್ನೂ, ಆ ಮೂಲಕ ಸಾಮಾಜಿಕ ಅಧಿಕಾರವನ್ನೂ ಪಡೆಯುವ ಆಶಯವನ್ನು ವ್ಯಕ್ತಪಡಿಸುತ್ತದೆ. ವ್ಯವಸ್ಥೆ ಎಂದಿನಿಂದಲೂ ಹೆಣ್ಣಿಗೆ ಧಾರ್ಮಿಕ ಅಧಿಕಾರವನ್ನು ನಿರಾಕರಿಸಿದೆ. ಅವಳನ್ನು 'ಹೊಲೆ' ಎಂದು, ದೇಹವನ್ನು 'ಅಪವಿತ್ರ' ಎಂದು ಕಾಣಲಾಗಿದೆ. ಇಂತಹ ಒಮ್ಮುಖ ನಿಲುವಿನ ಅಸಹಜ ಬೆಳವಣಿಗೆಯಂತೆ ಕೋಮುವಾದ ಕಾಣುತ್ತಿದೆ. ಹಾಗಾಗಿ ಕವಿತೆ ಯಾಜಮಾನ್ಯಕೇಂದ್ರವನ್ನು ಪ್ರಶ್ನಿಸುತ್ತದೆ. ಮಹಿಳಾ ಪ್ರಜ್ಞೆಯಲ್ಲಿ ಇಂತಹ ಕಲ್ಪನೆಯೊಂದು ಸಾಧ್ಯವಾಗಿದೆ ಎನ್ನುವುದೇ ಕ್ರಾಂತಿಕಾರಕವಾದದ್ದು. ಹೆಣ್ಣನ್ನು ಧರ್ಮ ತನ್ನ ಸೊತ್ತು ಮತ್ತು ತೊತ್ತು ಎಂದೇ ವ್ಯಾಖ್ಯಾನಿಸುತ್ತ ಬಂದಿದೆ. ಆಧುನಿಕ ಕಾಲದಲ್ಲಿಯೂ ಹೆಣ್ಣನ್ನು ತನ್ನ ಮುಖಾಬಿಲೆ ಮಾಡಿಕೊಂಡು, ಚಹರೆಗಳನ್ನೊತ್ತುವ ಎಲ್ಲ ಒತ್ತಡವನ್ನೂ ಹೇರುತ್ತಿದೆ. ಇಂತಹ ಪುರುಷಪ್ರಧಾನ ಧಾರ್ಮಿಕತೆಯನ್ನು ವಿರೋಧಿಸಲು ಮಾತೃಪ್ರಧಾನ ಸ್ಮೃತಿಯೊಂದು ಕೆಲಸಮಾಡಿದಂತಿದೆ. ನಿಜವಾದ ಅರ್ಥದಲ್ಲಿ 'ದುಷ್ಟನಿಗ್ರಹ' ಸಾಧ್ಯವಾಗಬೇಕೆಂಬ ಸಾಮಾಜಿಕ ಬದ್ಧತೆಯಿದು.

**ಅಭಿವ್ಯಕ್ತಿ ವಿಧಾನ**

ಪ್ರತಿಯೊಂದು ಹಕ್ಕಿ ತನ್ನ ಗೂಡು ಕಟ್ಟಿಕೊಳ್ಳುವ ಹಾಗೆ ಭಾವನೆ–ಚಿಂತನೆಗಳು ಅಗತ್ಯವಾದ ಭಾಷೆಗಾಗಿ ನಿರಂತರ ಶೋಧದಲ್ಲಿರುತ್ತವೆ. 'ನನ್ನ ಅವತಾರ' ಎಂಬ ಈ ಕವಿತೆ ದೇವರು–ಧರ್ಮದ ಕುರಿತ ಪರಂಪರಾಗತ ಗ್ರಹೀತಗಳನ್ನು ಬೇಧಿಸುವಾಗ ಕಾವ್ಯದ ಸಿದ್ಧ, ಶಿಷ್ಟ ಭಾಷೆಯನ್ನು ಬಿಡುತ್ತದೆ. ಗ್ರಾಮೀಣ ಭಾಷೆಯನ್ನು ಆಯ್ದುಕೊಳ್ಳುತ್ತದೆ. ಜನಪದ ಭಾಷೆಯನ್ನು ಕವಿತೆಯಲ್ಲಿ ಬಳಸುವುದು ಚಿಂತನೆಗೆ ಸಮುದಾಯವನ್ನು ಸಪೋರ್ಟಿವ್ ಆಗಿಸಿಕೊಳ್ಳುವ ಉಪಾಯವಾಗಿದೆ ಮತ್ತು ಭಾಷೆಯ ಮೂಲಕ ತನ್ನ ಸಂವೇದನೆಯನ್ನು ತಲುಪಿಸಬೇಕೆಂಬ ಗಮ್ಯವೂ ಆಗಿದೆ. ಇದು ಕವಿತೆ ಜನಪದೀಕರಣಗೊಳ್ಳುವ ಪ್ರಯತ್ನ, ಗ್ರಾಮೀಣ ಭಾಷೆಯ ಲಯಗಾರಿಕೆಯಲ್ಲಿ ಅನುಸಂಧಾನಗೊಳ್ಳುತ್ತ

ಬಂದ ಇಲ್ಲಿಯ ಸಂಬೋಧನಾವಾಚಿ ಪದಗಳು ಕವಿತೆಯ ತ್ರಾಣವಾಗಿವೆ. ಶ್ರೀಕೃಷ್ಣಪರಮಾತ್ಮ ಎಂದು ಬಿಂಬಿತವಾದವ ಇಲ್ಲಿ 'ಕಿಟ್ಟೂ' ಆಗಿಬಿಡುತ್ತಾನೆ. ಅಂಜಬುರುಕಾ, ನಾಚಿಗ್ಗೇಡಿ, ಖೋಡಿ, ಭಡವಾ, ಹೇಸಿ, ಮಾವಾ ಇವೆಲ್ಲ ಅವನನ್ನು ವೈಭವೀಕರಿಸುವ ಅಲಂಕರಣಗಳಾಗುತ್ತವೆ. ಹಿಂದೂತ್ವದ ಕೋಮುವಾದವನ್ನು ವಿರೋಧಿಸಲು ಬಳಕೆಯಾಗುವ ದಟ್ಟ ವಿಡಂಬನೆ ಈ ಕವಿತೆಯ ಧೀಶಕ್ತಿ. ಮೇಲ್ನೋಟಕ್ಕೆ ಈ ವಿಶೇಷಣಗಳು ಬೈಗುಳಗಳಾಗಿ ಮಾತ್ರ ಕಾಣುತ್ತವೆ. ಆದರೆ ಈ ಪ್ರತಿಯೊಂದು ಪದಗಳೂ ಕೃಷ್ಣಕಥನದ ಪೂರ್ವಗ್ರಹೀತಗಳನ್ನು ಛಿದ್ರಗೊಳಿಸುವ ಪ್ರಯತ್ನಗಳಾಗಿವೆ. ಇನ್ನೊಂದು ವಿಧದಲ್ಲಿ ಇದು ದೈವತ್ವವನ್ನು ಮಾನವೀಕರಣಗೊಳಿಸುವ ತಂತ್ರವಾಗಿದೆ. ಮತ್ತು ಈ ಆತ್ಮೀಯ ಆಕ್ಷೇಪಣೆಯ ಧಾಟಿಯು ಕವಿತೆಯ ನಿಷ್ಠುರತೆಯಿರುವುದು ಕೃಷ್ಣನೊಂದಿಗಲ್ಲ, ಅವನನ್ನು ಸುತ್ತುವರಿದಿರುವ ದುಷ್ಟಕೂಟದೊಂದಿಗೆ ಎಂದು ಸೂಚಿಸುತ್ತದೆ. ಇದು ತನ್ನ ದೈವವನ್ನು ಗರ್ಭಗುಡಿ ಸಂಸ್ಕೃತಿಯಲ್ಲಿ ಬಂಧಿಸಿಟ್ಟಿರುವ ವೈದಿಕಶಾಹಿ ಮತ್ತು ಅದನ್ನು ಬಳಸಿಕೊಳ್ಳುತ್ತಿರುವ ಹಿಂದೂತ್ವದ ವಿರೋಧವೇ ಆಗಿದೆ.

ಪಿತೃ ವ್ಯವಸ್ಥೆಯ ಧಾರ್ಮಿಕ ಯಾಜಮಾನ್ಯದ ಸರಹದ್ದನ್ನು ಉಲ್ಲಂಘಿಸುತ್ತಿರುವ ಕವಿತೆಯಿದು. ಅವತಾರಗಳ ಭಂಜಕತೆಯ ಪ್ರತಿನಿರ್ಮಿತಿಯ ಜರೂರಿನಲ್ಲಿ 'ನನ್ನ ಅವತಾರ' ಎಂಬ ಪರಿಕಲ್ಪನೆ ಹುಟ್ಟಿದೆ. ಆದರೆ ಮೂಲತಃ ಅದು ಯಾಜಮಾನ್ಯ ವ್ಯವಸ್ಥೆಯು ಹುಟ್ಟಿಸಿದ್ದು. ರಾಕ್ಷಸರನ್ನು ಚೆಂಡಾಡಿದ ಸ್ತ್ರೀ ದೇವತೆಗಳ ಕಲ್ಪಿತಗಳಲ್ಲಿ ಬಳಕೆಯಾದ ಸಂವೇದನೆ ಮತ್ತು ಭಾಷೆ ಇಲ್ಲಿಯೂ ನಿರ್ವಹಣೆಯಾಗಿದೆ. 'ಚಂಡಾಲರ್ನೆಲ್ಲ ಚೆಂಡಾಡಿ, ರುಂಡಮಾಲಿ ಹಾಕ್ಕೊಂಡು ಕುಣಿತೀನಿ' ಎನ್ನುವ ಉನ್ಮಾದವು ವ್ಯವಸ್ಥೆ ನಿರ್ಮಿಸಿ ಚಲಾವಣೆಗೆ ಬಿಟ್ಟ ದೇವಿ ಮಾದರಿಯೇ. ಚಂಡಾಲರು ಯಾರು? ಎಂಬ ಆಯ್ಕೆ ಬದಲಾಗುತ್ತಿರಬಹುದು. ಆದರೆ ಆ ಶಬ್ದದೊಂದಿಗೆ ಅರ್ಥದ ಸೂತಕವೂ ಉಳಿದುಬರುತ್ತದೆ. ಭಾಷೆಯ ಆವೇಶ ಕೂಡ ಕವಿತೆಯು ಪ್ರತಿಪಾದಿಸುವ ಅವತಾರದ ಅವಾಸ್ತವಿಕತೆಯನ್ನು ಸೂಚಿಸುತ್ತದೆ. ಮಾಲಿ, ನತ್ತು, ಬಳೆಗಳು ಮುತ್ತೈದೆತನದ ಲಕ್ಷಣಗಳಾಗುತ್ತ ಇಳಿಕೆಯ ಕಡೆ ಹರಿಯುವ ನೀರಿನಂತೆ ಮತ್ತೆ ಹಿಂದೂತ್ವದ ದೈವೀಕಲ್ಪನೆಯೆಡೆಗೆ ಚಲಿಸುತ್ತದೆ. ಹೆಣ್ಣಿನ ಸಂವೇದನೆಯು ಪುರುಷ ಭಾಷೆಯಲ್ಲಿ ವ್ಯವಹರಿಸುವಾಗ ಎದುರಾಗುವ ಬಿಕ್ಕಟ್ಟುಗಳಿವು. ಇಂತಹ ಭಾಷಿಕ ಬಿಕ್ಕಟ್ಟುಗಳನ್ನು ಗಮನಿಸುವುದು ಎಂದರೆ ಸಿದ್ಧ ವ್ಯವಸ್ಥೆಗೆ ಎದುರಾಗಿ ಯೋಚಿಸುವ ಬಿಕ್ಕಟ್ಟನ್ನು ಗಮನಿಸುವುದೇ ಆಗಿದೆ. ❑



# ಅನ್ಯಾಯ

ಪಾಪ ಆ ಬಡ ಹೆಣ್ಣು ಜೀವ
ಅನ್ಯಾಯವಾಗುತ್ತಿರುವುದನ್ನು ನೋಡಿ, ನೋಡಿ
ಕಣ್ಣು ಇಲ್ಲದ ಕುರುಡಾಗಿ
ಅನ್ಯಾಯದ ವಿರುದ್ದ ಹೋರಾಡದೆ
ಅದರಲ್ಲಿಯೇ ವಿಲಿ ವಿಲಿ ಒದ್ದಾಡಿ
ಶ್ರೀಮಂತರು ಆಡಿಸುವ ಆಟದಲ್ಲಿ
ಆಡಿ ಅವರ ಕೈಗೊಂಬೆಯಾಗಿ
ವೈಚಳಿ ಬಿಟ್ಟು ಓಡಾಡದೆ
ಅವರ ಮುಂದೆ ತಲೆ ತಗ್ಗಿಸಿ
ಬಾಳಲ್ಲಿ ಕಲಿತ ವಿದ್ಯೆಯನ್ನು
ಉಪಯೋಗಿಸದೆ,
ಅವರ ಬಂಡವಾಳ ಬುದ್ದಿಗೆ ಬಲಿಯಾಗಿ
ಎಲ್ಲಿ ಮಣ್ಣಲ್ಲಿ ಮಣ್ಣಾಗುತ್ತೇನೆ
ಎಂಬ ಭಯ ಕಾಡುತ್ತಿದೆ ಬಡ ಹೆಣ್ಣು ಜೀವಕ್ಕೆ.

■ **ಸುರೇಖಾ ರಾಠೋಡ**
ಬಿಜಾಪುರ

*ನಮ್ಮ ಮಾನಸಕ್ಕೆ ಲೇಖನ, ವಿಮರ್ಶೆ, ಕವನಗಳನ್ನು ಇ-ಮೇಲ್ ಮೂಲಕ ಕಳುಹಿಸುವವರು ನುಡಿ ಲಿಪಿಯಲ್ಲಿ ಮಾತ್ರ ಕಳುಹಿಸಿ.*

# ರಂಗದಿಂದ ನಿರ್ಗಮಿಸಿದ ರಂಗ 'ನಾಯಕಿ'

■ ಮುರಳೀಧರ ಖಜಾನೆ



*"ಕಲ್ ಖೇಲ್ ಮೇ ಹಮ್ ಹೋ ನ ಹೋ*
*ಗರ್ದಿಷ ಮೇ ತಾರೆ ರಹೇಂಗೆ ಸದಾ*
*ಭೂಲೇಂಗೆ ಹಮ್ ಭೂಲೇಂಗೆ ವೋ*
*ಪರ್ ಹಮ್ ತುಮ್ಹಾರೇ ರಹೇಂಗೇ ಸದಾ"*
*-(ಮೇರಾ ನಾಮ್ ಜೋಕರ್)*

ದಶಕಗಳ ಕಾಲ ರಂಗಮಂಚದ ಮೇಲೆ 'ಗಂಡಾಗಿ' ಪ್ರೇಕ್ಷಕರನ್ನು ಮಂತ್ರಮುಗ್ಧವಾಗಿಸಿದ ಹೆಣ್ಣುಜೀವವೊಂದರ ಬದುಕಿನಾಟಕ್ಕೆ ಅಂತಿಮ ತೆರೆ ಬಿದ್ದಿದೆ. ರಂಗ ತೊರೆದ ರಂಗನಾಯಕಿ ಆಗಸದಲ್ಲಿ 'ಮಿನುಗುತಾರೆ' ಯಾಗಿದ್ದಾರೆ. ಕಪ್ಪು ಬಿಳುಪಿನ ಲೋಕದಲ್ಲಿ ಮಾತ್ರಕ್ಕೆ ಬಣ್ಣಕ್ಕೆ ಬೆಲೆ. ನಮ್ಮ ಸುತ್ತ ಸಂವೇದನಾ ರಹಿತ ಬಣ್ಣಗಳೇ ರುದ್ರನರ್ತನ ಮಾಡುತ್ತಿರುವ ಇಂದಿನ ಉಪಗ್ರಹ 'ನಿಯಂತ್ರಿತ' ಸಾಂಸ್ಕೃತಿಕ ಕಾಲಘಟ್ಟದಲ್ಲಿ, ಈ ರಂಗನಾಯಕಿಯನ್ನು ನಾವು ಮರೆತು ಯಾವುದೋ ಕಾಲವಾಗಿದೆ. ಈ ರಂಗನಾಯಕಿ ಅಕ್ಟೋಬರ್ 6 ರಂದು : ರಾಜ್ಯ ಕಾವೇರಿ ಕಾವಿನ ನಾಟಕದಲ್ಲಿ ಕನಲುತ್ತಿದ್ದಾಗ ರಂಗದಿಂದ ಭೌತಿಕವಾಗಿ ನಿರ್ಗಮಿಸಿದ್ದಾರೆ. ಆದರೆ ಸಾಂಸ್ಕೃತಿಕವಾಗಿ ಮಾನಸಿಕವಾಗಿ ನಮ್ಮೊಂದಿಗಿದ್ದಾರೆ.

ಈ ರಂಗನಾಯಕಿ ಆರ್. ನಾಗರತ್ನಮ್ಮ

ಮೈಸೂರಿನ ಸಾಂಪ್ರದಾಯಿಕ ಮಧ್ಯಮವರ್ಗದ ಕುಡಿಯಾದ ಇವರು ಹನ್ನೆರಡರ ಎಳೆವಯಸ್ಸಿನಲ್ಲಿ ಹಚ್ಚಿದ ಬಣ್ಣ ಅವರ ಎಪ್ಪತ್ತಾರನೇ ವರ್ಷದ ವರೆಗೂ ಅಳಿಸಲೇ ಇಲ್ಲ. ಆದರೂ ನಾಗರತ್ನಮ್ಮ ಹೇಳಿಕೊಂಡದ್ದು ರಂಗಭೂಮಿಗೆ ಅವರದು ಅಳಿಲು ಸೇವೆ. ಪ್ರಚಾರವೇ ಜೀವಾಳವಾದ ಇಂದಿನ ಸಂದರ್ಭದಲ್ಲಿ ಕಣ್ಮರೆಯಾಗಿರುವ ವಿನಯ. ಮತ್ತೊಂದು ವಿಷಯ ನೆನಪಿಸಬೇಕು. ನಾಗರತ್ನಮ್ಮ ರಂಗಭೂಮಿಗಷ್ಟೇ ಮೀಸಲಾಗಲಿಲ್ಲ. ಚಲನಚಿತ್ರದಲ್ಲೂ ಅಭಿನಯಿಸಿದರು. ಡಾ. ರಾಜಕುಮಾರ್ ಅವರ 'ಕಾಮನಬಿಲ್ಲು', ಲೋಕೇಶ್ ಅವರ 'ಪರಸಂಗದ ಗೆಂಡೆತಿಮ್ಮ' ನೋಡಿದವರಿಗೆ ನಾಗರತ್ನಮ್ಮ ನೆನಪಾಗುತ್ತಾರೆ. ರಂಗಭೂಮಿಗೆ ನಾಗರತ್ನಮ್ಮ ನೀಡಿದ ಕೊಡುಗೆ ಪರಿಗಣಿಸಿ ಕೇಂದ್ರ ಸರ್ಕಾರ ಅವರಿಗೆ ಕಳೆದ ಏಪ್ರಿಲ್‌ನಲ್ಲಿ ಪದ್ಮಶ್ರೀ ಪ್ರಶಸ್ತಿ ಪ್ರದಾನ ಮಾಡಿತ್ತು. ನಾಗರತ್ನಮ್ಮನಿಗೆ ಕೆಂದ್ರ ಸಂಗೀತ - ನಾಟಕ ಅಕಾಡೆಮಿ ಪ್ರಶಸ್ತಿ ಬಂದಾಗ ಲೇಖನ ಇದು. ಆ ಕಾಲದ ಬರಹ ಹೇಗಿತ್ತೋ ಹಾಗೆ, ಆ 'ಬಣ್ಣ' ಮಾಸದ ಹಾಗೆ ನೀಡಿದ್ದೇವೆ.... ರಂಗನಾಯಕಿಯ ಬದುಕಿನ ದೂರತೀರ ಯಾನ ನಿಮಗಾಗಿ....



## ನೆನಪಿನಂಗಳದಲ್ಲಿ ಮುಸ್ಸಂಜೆ ಹೊತ್ತು

ಸುಮಾರು ಮೂವತ್ತು ವರ್ಷಗಳ ಹಿಂದಿನ ಮಾತು. ಮಂಡ್ಯದಲ್ಲಿ ನಾಟಕದ ಕಂಪನಿಯೊಂದು ಬೀಡುಬಿಟ್ಟು 'ಕೃಷ್ಣಾರುಡಿ' ಪ್ರಸಂಗ ಆಡಿತು. ರಂಗದ ಮೇಲೆ ಹುರಿ ಮಾಡಿದ ದಪ್ಪ ಮೀಸೆ, ಗಂಟಿಕ್ಕಿದ ಹುಬ್ಬು, ಗರಗರನೆ ತಿರುಗುವ ಕೆಂಗಣ್ಣು, ಹೆಗಲೇರಿದ ಗಧೆಯನ್ನು ಬೀಸುತ್ತಾ ಭೀಮನ ಪಾತ್ರಧಾರಿ ಕಾಣಿಸಿಕೊಂಡಾಗ ಮುಂದಿನ ಬೆಂಚಿನ ಮೇಲೆ ಮಗುವೊಂದು ಚಿಟ್ಟನೆ ಚೀರಿತು. ಎತ್ತರದ ಧ್ವನಿಯಲ್ಲಿ ಗುಡುಗುತ್ತಾ, ರಂಗ ಮಂಚವನ್ನೇ ನಡುಗಿಸಿದ ಭೀಮನ ಪಾತ್ರಧಾರಿ ಹೆಣ್ಣೆಂದು ಗೊತ್ತಾದಾಗ, ಯಾರಿಗೂ ನಂಬಿಕೆ ಬಾರದು. ನಂಬಿಕೆ ಬಂದಾಗ 'ಒನ್ಸ್ ಮೋರ್'ಗಳ ಸುರಿಮಳೆ, ಕಂಪೆನಿಯ ಕ್ಯಾಂಪಿನ ಛಾವಣಿ ಹಾರಿಹೋಗುವಂಥಾ ಕರತಾಡನ....

ಮೈಸೂರಿನ ರಂಗಮಂದಿರವಂದರಲ್ಲಿ ಇದೇ 'ಕೃಷ್ಣಾರುಡಿ' ನಾಟಕ. ಮತ್ತೇ ಭೀಮನ ರೌದ್ರಾವತಾರ. ನಾಟಕ ಮುಗಿಯುತ್ತಿದ್ದಂತೆ ತೆರೆಯ ಮರೆಗೆ ಬಂದ ವಯೋವೃದ್ಧರೊಬ್ಬರು ಭೀಮನ ಪಾತ್ರಧಾರಿಯ ಕಾಲಿಗೆರಗಿ "ಅಮ್ಮಾ ಮೂವತ್ತು ವರ್ಷದ ಹಿಂದೆ ಹೇಗೆ ರಂಗದ ಮೇಲೆ ವಿಜ್ರಂಭಿಸಿದೆಯೋ. ಇಂದೂ ನನ್ನ ಕಣ್ಣಿಗೆ ಹಾಗೆಯೇ ಕಂಡೆ." ಎಂದು ಭಾವಪರವಶರಾಗಿ ಕಣ್ಣೀರು ಹಾಕಿಕೊಂಡರು.

.....ಈ ಎರಡೂ ಘಟನೆಯನ್ನು ನೆನಪಿಸಿಕೊಳ್ಳುತ್ತಾ "ನನಗೆ ಗೊತ್ತು ಅಂದು ಮೈಯಲ್ಲಿದ್ದ 'ಕಸುವು' ಇಂದಿಲ್ಲ. ಇಂದು ರಂಗಮಂಚವೇರಿದರೆ ಬಹಳ ಕಾಲ ನಿಲ್ಲಲಾಗುವುದಿಲ್ಲ. ಧ್ವನಿಯಲ್ಲೂ ಹೇಳಿಕೊಳ್ಳುವಂಥಾ ಸ್ಥಿರತೆ ಇರುವುದಿಲ್ಲ. ಆದರೂ ಜನರ ಅಭಿಮಾನ ದೊಡ್ಡದು. ನನ್ನನ್ನು ಹರಸಿ ಬೆಳೆಸಿದವರು ಅವರು." ಎನ್ನುವ ಆರ್. ನಾಗರತ್ನಮ್ಮನವರ ಮಾತುಗಳನ್ನು ಕೇಳಿದರೆ ಅವರ ಸರಳತೆಯ ಬಗ್ಗೆ ಅಭಿಮಾನ ಮೂಡುತ್ತದೆ.

ಕಳೆದ 40 ವರ್ಷಗಳ ತಮ್ಮ ವೃತ್ತಿ ರಂಗಭೂಮಿಯ ಬದುಕಿನಲ್ಲಿ ಮೂವತ್ತಕ್ಕೂ ಹೆಚ್ಚು ವರ್ಷಗಳ ಕಾಲ ಗಂಡಾಗಿ ರಂಗಭೂಮಿಯಲ್ಲಿ ಕಾಣಿಸಿಕೊಂಡು, ಪ್ರೇಕ್ಷಕರ ಹೃದಯದಲ್ಲೊಂದು ಸ್ಥಾನ ಗಿಟ್ಟಿಸಿಕೊಂಡು ಸ್ತ್ರೀ ನಾಟಕಮಂಡಳಿ ಸ್ಥಾಪಿಸುವಂಥಾ ಮಹಾ ಸಾಹಸಕ್ಕೆ ಕೈ ಹಾಕಿದ ನಾಗರತ್ನಮ್ಮ ರಂಗಭೂಮಿಗೆ ಸಲ್ಲಿಸಿರುವ ಸೇವೆಗೆ ಅವರಿಗೆ ಕೇಂದ್ರದ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿಯು ದೊರಕಿದೆ. ಕೇವಲ ಮಹಿಳೆಯರೇ ಇರುವ ಅವರ ಸ್ತ್ರೀ ನಾಟಕ ಮಂಡಳಿ ಬಹುಶ: ಭಾರತದಲ್ಲಿ ಇದೊಂದೇ ಏನೋ!

ಕರ್ನಾಟಕದ ಮೂಲೆ ಮೂಲೆಯನ್ನು ಆಕ್ರಮಿಸಿಕೊಳ್ಳುತ್ತಿರುವ ಕೇಬಲ್ ಟಿ.ವಿ., 'ಜೀ' ಟಿ.ವಿ., 'ಎಂ' ಟಿ.ವಿ., ಸ್ಟಾರ್ ಟಿವಿ ಗಳ ಜಾಲದಲ್ಲಿ ಮೊದಲೇ ಕೊನೆಯುಸಿರೆಳೆಯುತ್ತಿದ್ದ ವೃತ್ತಿ ರಂಗಭೂಮಿಯ ಜೀವವಾಯು ಇನ್ನೂ ಕ್ಷೀಣವಾಗುತ್ತಿರುವ ಇಂದಿನ ಸಂಧರ್ಭದಲ್ಲಿ ನಾಗರತ್ನಮ್ಮನಿಗೆ ಸಂದಿರುವ ಈ ಪ್ರಶಸ್ತಿಗಾಗಿ ಅವರನ್ನು ಅಭಿನಂದಿಸಲು ಅವರ ರಾಜಾಜಿನಗರದ ಮನೆಗೆ ಕಾಲಿಟ್ಟಾಗ ಹಜಾರದಲ್ಲಿ ಮೊದಲು ಗಮನಸೆಳೆದದ್ದು ಆಳೆತ್ತರದ ಭೀಮನ ಪಾತ್ರಧಾರಿ ನಾಗರತ್ನಮ್ಮನವರ ಚಿತ್ರ, ಅದರ ಕೆಳಗಿನ ಕಪಾಟಿನಲ್ಲಿ ನಾಗರತ್ನಮ್ಮನವರಿಗೆ ಜನ ಪ್ರೀತಿಯಿಂದ ನೀಡಿದ ಪಾರಿತೋಷಕಗಳು. ಚಿತ್ರದಲ್ಲಿ ನೆಟ್ಟದೃಷ್ಟಿಯಿಂದ ಮುಳುಗಿದ್ದ ತಲ್ಲೀನತೆಗೆ ಭಂಗ ತಾರದಂತೆ ಮೃದುವಾದ ಹೆಜ್ಜೆಗಳನ್ನಿಡುತ್ತ ನಾಗರತ್ನಮ್ಮ ಬಂದು ಕುಳಿತರು.

ಇಳಿವಯಸ್ಸಿನಲ್ಲೂ ಎದ್ದು ಕಾಣುವ ಲವಲವಿಕೆ ಸೂಸುವ ಆಕೃತಿ. ವಯಸ್ಸು ಮಾಗಿರುವುದನ್ನೂ ಸೂಚಿಸಲೋ ಎಂಬಂತೆ ಹಣಕಿ ಹಾಕುವ ಬೆಳ್ಳಿ ಕೂದಲು, ಹಣೆಯಲ್ಲೊಂದು ಪುಟ್ಟ ತಿಲಕ. ನಗುನಗುತ್ತಲೇ ಮಾತಿಗಿಳಿದ ನಾಗರತ್ನಮ್ಮ ಪ್ರಶಸ್ತಿಗೆ ಪ್ರತಿಕ್ರಿಯಿಸಿದ್ದು ಹೀಗೆ : " ಪ್ರಶಸ್ತಿ, ಇಡೀ ವೃತ್ತಿ ರಂಗಭೂಮಿಗೆ, ಅದರಲ್ಲೂ ಶ್ರೀ ಸ್ತ್ರೀ ನಾಟಕ ಮಂಡಳಿಗೆ ಬಂದಿರುವುದು, ನನಗಲ್ಲ. ಈ ಪ್ರಶಸ್ತಿ, ಪ್ರೋತ್ಸಾಹ ಮೊದಲೇ ಸಿಕ್ಕಿದ್ದರೆ ಬಹುಶ: ನಾವು ಕಂಪನಿ ಮುಚ್ಚುತ್ತಿರಲಿಲ್ಲವೋ ಏನೋ" ಈ ಪ್ರಶಸ್ತಿಯಿಂದ, ಪ್ರಶಸ್ತಿ ಬಂದ ಸಂತಸವಿದೆಯೇ ಹೊರತು ಇತಿಹಾಸದ ಒಂದು ಭಾಗವಾಗುತ್ತಿರುವ ಸ್ತ್ರೀ ನಾಟಕ ಮಂಡಳಿಗೆ ಮತ್ತೆ ಜೀವಪ್ರತಿಷ್ಠಾಪನೆ ಮಾಡುವುದು ಸಾಧ್ಯವಿಲ್ಲವಲ್ಲ ಎಂಬ ಗಾಢವಾದ ನೋವು ಅವರನ್ನು ಕಾಡುತ್ತಿರುವುದು ಅವರ ಈ ಮಾತುಗಳಿಂದ ವ್ಯಕ್ತವಾಗುತ್ತದೆ.

ಎದುರಿನ ತಮ್ಮ ಭೀಮನ ಚಿತ್ರದಲ್ಲಿ ದೃಷ್ಟಿನೆಟ್ಟು "ಅಂದಿನ ವೈಭವವೆಲ್ಲಾ ಇಂದು ಕೇವಲ ನೆನಪು ಮಾತ್ರ. ಒಮ್ಮೊಮ್ಮೆ ಅದೆಲ್ಲಾ ನಮ್ಮ ಜೀವನದ ರಂಗಮಂಚದಲ್ಲಿ ನಿಜವಾಗಿ ನಡೆದ ಘಟನೆಗಳೋ, ಅಥವ ಭ್ರಮೆಯೋ ಎಂದು ಮೈಚಿವುಟಿ ನೋಡಿಕೊಳ್ಳುವಂತಾಗುತ್ತದೆ." ಎಂದು ಅವರು ಮುಸ್ಸಂಜೆ ಕವಿಯುತ್ತಿದ್ದಂತೆ ನೆನಪಿನಂಗಳಕ್ಕಿಳಿದಾಗ, ಹೊರಗಿನ ಕಾಂಕ್ರೀಟ್ ಕಾಡಿನ ಸದ್ದೆಲ್ಲಾ ಕರಗಿ ಅವರ ಧ್ವನಿಯ ಲಯ ಮಾತ್ರ ಕಿವಿಗೆ ಬಡಿಯುತ್ತಾ ಎದುರಿಗೆ ಅದ್ಭುತವಾದ ಯಕ್ಷಲೋಕವೊಂದರ ತೆರೆ ಸರಿದು ಒಂದೊಂದೇ ದೃಶ್ಯಗಳು ಮೂಡತೊಡಗಿದವು.

"ಹೆಣ್ಣು ಮಕ್ಕಳು ಸಾರ್ವಜನಿಕವಾಗಿ ಕಾಣಿಸಿಕೊಳ್ಳುವುದೇ ತಪ್ಪು ಎನ್ನುವಂಥಾ ಕಾಲ ಅದು. ಮೈಸೂರಿಗೂ ಆಗ ನಾಟಕದ ಕಂಪನಿಗಳು ಬರುತ್ತಿದ್ದವು. ನನಗಾಗ ಐದು ವರ್ಷ. ನಾನು ಎಲ್ಲಾ ನಾಟಕ ನೋಡಲು ಹೋಗುತ್ತಿದ್ದೆ. ಸ್ಟೇಜ್ ನಲ್ಲಿ 'ಸೈಡ್ ವಿಂಗ್ಸ್' ನಲ್ಲಿ ನಾಟಕ ನೋಡ್ತಿದ್ದೆ. ಒಂದು ಸಾರಿ ಚಾಮುಂಡೇಶ್ವರಿ ಕಂಪನಿ 'ಸಂತ ತುಕಾರಾಂ' ಪ್ರದರ್ಶನ ಕೊಡ್ತಿತ್ತು. ಅದರಲ್ಲಿ ಚಿಕ್ಕ ಹುಡಗಿಯನ್ನು ಮದುವೆಯಾಗುವ ಒಂದು ದೃಶ್ಯ. ಆ ಹುಡುಗಿಗೆ ವಿಪರೀತ ಜ್ವರ, ಆಗ ಕೊಟ್ಟೂರಪ್ಪನವರು ನಾಟಕ ಅಭ್ಯಾಸ ಮಾಡಿಸುವುದನ್ನು ನೋಡುತ್ತಿದ್ದ ನನ್ನನ್ನೇ ಮದುವೆ ಹೆಣ್ಣಾಗಿ ಮಾಡಿದರು. ನನಗೂ ಖುಷಿ. ಚೆನ್ನಾಗಿ ಪಾತ್ರ ಮಾಡಿದೆ ಎಂದು ಎಲ್ಲರೂ ಹೇಳಿದ್ರು, ಅಲ್ಲಿಂದ ನನ್ನದೂ ನಾಟಕ ಕಂಪನಿದೂ ಸಂಬಂಧ ಬೆಳೀತು. ನಂತರ ನಾಟಕ ಕಂಪನಿ ಹೋದಲ್ಲೆಲ್ಲ ನನ್ನ ಕರೀತಿದ್ರು, ಬಿ.ಎಂ. ಚಿನ್ನಪ್ಪ, ಹುಣಸೂರು ಕೃಷ್ಣಮೂರ್ತಿ, ಎಂ. ಎಸ್. ಮಾಧವರಾವ್ ಎಲ್ಲರ ಜೊತೆ, 'ಸದಾರಮೆ', 'ಸಂಸಾರ ನೌಕೆ', 'ಮಹಾಕವಿ ಕಾಳಿದಾಸ' ಎಲ್ಲಾ ನಾಟಕದಲ್ಲೂ ನಾಯಕಿಯ ಪಾತ್ರ ನನ್ನದೇ. ನಮ್ಮಮ್ಮನಿಗೆ ನಾನು ನಾಟಕದಲ್ಲಿ ಪಾರ್ಟ್ ಮಾಡೋದು ಸುತಾರಾಂ ಇಷ್ಟವಿರಲಿಲ್ಲ. ಆದರೆ ನಾನಗಲೇ ನಾಟಕದ ಮೋಡಿಗೆ ಸಿಕ್ಕಿಕೊಂಡಿದ್ದೆ. ನನ್ನ ಅದೃಷ್ಟಕ್ಕೆ ನಾಟಕಲೋಕದ ವ್ಯಕ್ತಿಯನ್ನೇ ಮದುವೆಯಾದೆ. ಅವರೇ ಪಾರ್ಥಸಾರಥಿ 'ಶೇಷಕಮಲ್ ಕಲಾನಾಟಕ ಮಂಡಳಿಯಲ್ಲಿ' ಹೆಸರಾಂತ ಹಾಸ್ಯ ನಟರು ಅವರು. ನಾಟಕ ಕಂಪನಿಯ ನಾಯಕಿಯಾಗಿ ಬದುಕು ಕಂಡುಕೊಂಡ ನಂತರ ಎಷ್ಟೋ ಕಂಪನಿಗಳಿಂದ ಕರೆ ಬರ್ತಿತ್ತು. ಅಲ್ಲೆಲ್ಲಾ ಹೋಗಿ ಅಭಿನಯಿಸಿ ಬಂದಿದ್ದೀನಿ. ಜಿ. ನಾಗೇಶರಾಯರು, ಗಂಗಾಧರರಾಯರು,

ಕೊಟ್ಟೂರಪ್ಪನವರು, ಬಸವರಾಜು ಸುಬ್ಬಯ್ಯನಾಯ್ಡು ಎಲ್ಲರ ಜೊತೆಗೂ ಅಭಿನಯಿಸಿದ್ದೀನಿ. ಆಗ ಇದ್ದವರಲ್ಲಿ ಹೆಸರಾಂತ ನಾಯಕಿಯಂದರೆ ಮಳವಳ್ಳಿ ಸುಂದರಮ್ಮ. ಎಂಥಾ ರೂಪ ಆಕೆಯದು! ಎಂಥಾ ಮಧುರವಾದ ಕಂಠ! ಎಂಥಾ ಪಾಂಡಿತ್ಯ. ರಂಗಭೂಮಿಯಲ್ಲಿ ಸುಭದ್ರೆಯಾಗಿ ಅರ್ಜುನನೆದುರು ಹಾಡಲು ಆರಂಭಿಸಿದರೆಂದರೆ ಮುಗಿಯಿತು. ಗಂಟೆ ಕಳೆದರೂ ಪ್ರೇಕ್ಷಕರಿಗೆ ಅರಿವಾಗದು. ಮಧ್ಯೆ ಮಧ್ಯೆ ಮೆಚ್ಚಿಗೆ ವ್ಯಕ್ತ ಪಡಿಸುತ್ತ ಹುರಿದುಂಬಿಸುತ್ತಿದ್ದರು. ಆಗ ಸಂಗೀತಾನೇ ಮುಖ್ಯವಾಗಿತ್ತು. ಕಾರಣ : ಮೈಕ್ ಇರಲಿಲ್ಲ. ಎಂಟಾಣೆ ಕ್ಲಾಸಿನ ವರೆಗೂ ಕೇಳಿಸಬೇಕು. ಸಂಭಾಷಣೆ ಅಷ್ಟೊಂದು ಮುಖ್ಯವಾಗಿರಲಿಲ್ಲ. ಸಂಗೀತವಾದರೆ ನಾಟಕದಲ್ಲಿ ಹೇಳಬಹುದಿತ್ತು. ಜತೆಗೆ ನಾಟಕದ ಕತೆಯೂ ಪೂರಕವಾಗಿತ್ತು. ಸಾಮಾನ್ಯವಾಗಿ ಪ್ರೇಕ್ಷಕನಿಗೆ ಕತೆ ಗೊತ್ತಿರುತಿತ್ತು. ನಾಟಕದ ಸಂದೇಶ ಸಂಗೀತದ ಮೂಲಕ ಪ್ರೇಕ್ಷಕರಿಗೆ ತಲುಪುತ್ತಿತ್ತು. ಸಂಗೀತದ ಮೂಲಕ ಯಾವ ರಸ ವ್ಯಕ್ತ ಪಡಿಸಬೇಕೆಂದು ಕಲಾವಿದರು ಇಷ್ಟಪಡುತ್ತಿದ್ದರೋ ಆ ರಸಾನುಭವ ಪ್ರೇಕ್ಷಕರಿಗೆ ಆಗುತ್ತಿತ್ತು. ಆಗ ನಮಗೆಂದೂ ಹಣ ಮುಖ್ಯವೇ ಆಗಿರಲಿಲ್ಲ. ನಾಟಕ ಆಡಬೇಕು. ಜನ ನಮ್ಮನ್ನು ಮೆಚ್ಚಬೇಕು. ಇಷ್ಟೇ ಮುಖ್ಯವಾಗಿತ್ತು. ಈ ರೀತಿ ಎಷ್ಟೋ ನಾಟಕ ಕಂಪನಿಗಳನ್ನು ಬದಲಾಯಿಸಿದ್ದೀನಿ. ಒಂದು ರೀತಿ ಅಲೆಮಾರಿ ಜೀವನ. ಡಾ. ರಾಜಕುಮಾರ್ ಅವರ ಜತೆನೂ ಸ್ವಲ್ಪ ಕಾಲ ಅಭಿನಯಿಸಿದ್ದೀನಿ. ಹವ್ಯಾಸಿ ನಾಟಕ ಮಂಡಳಿನಲ್ಲೂ ನಾಯಕಿಯ ಪಾತ್ರ ಮಾಡಿದ್ದೀನಿ.

ಆದರೆ ಕೇವಲ ನಾಟಕಗಳಲ್ಲಿ ನಾಯಕಿಯಾಗಷ್ಟೇ ಅಭಿನಯಿಸಿದ್ದರೆ ನಾನು ಇಂದು ಮರೆಯಾಗಿ ಹೋಗಿರುವ ಅನೇಕ ನಾಯಕಿಯರ ಸಾಲಿಗೆ ಸೇರಿ ಹೋಗುತ್ತಿದ್ದೆನೋ ಏನೋ! ಆದರೆ 'ಸ್ತ್ರೀ ನಾಟಕ ಮಂಡಳಿ' ಯ ಆರಂಭ ಪ್ರೇಕ್ಷಕರು ನನ್ನನ್ನು ಬೇರೆಯೇ ಗುರುತಿಸುವಂತೆ ಮಾಡಿತು.



ಸ್ತ್ರೀ ನಾಟಕ ಮಂಡಳಿ ಆರಂಭವಾದದ್ದೇ ಒಂದು ವಿಚಿತ್ರ ಸನ್ನಿವೇಶದಲ್ಲಿ. ನಾಟಕದಲ್ಲಿ ಆಸಕ್ತಿಯಿದ್ದ ಮೈಸೂರಿನ ಅಂಬುಜಮ್ಮ ಎನ್ನುವ ಹೆಣ್ಣುಮಗಳು ಅವರ ಮಗಳ ಮದುವೆ ಸಂದರ್ಭದಲ್ಲಿ ಹೆಣ್ಣುಮಕ್ಕಳನ್ನೇ ಸೇರಿಸಿ ಒಂದು ನಾಟಕ ಆಡಿಸುವ ಯೋಚನೆ ಮಾಡಿದರು. ಅವರು ಯೋಚಿಸಿದ್ದು 'ಕೃಷ್ಣಗಾರುಡಿ' ಆಡಬೇಕೆಂದು. ಅದರಲ್ಲಿ 'ಭೀಮ' ನ ಪಾತ್ರ ಮಾಡಬೇಕೆಂದು ನನ್ನನ್ನು ಕೇಳಿದರು. ನಾನು ಒಪ್ಪಿಕೊಂಡು ಬಿಟ್ಟೆ. 'ನಾಯಕಿಯ ಪಾತ್ರದಲ್ಲಿ ಈಗಾಗಲೇ ಸಾಕಷ್ಟು ಹೆಸರುಗಳಿಸಿರುವ ನೀನು ಅನ್ಯಾಯವಾಗಿ ಹೆಸರು ಕೆಡಿಸಿಕೊಳ್ಳುತ್ತಿ. ನಿನಗೇಕೆ ಈ ಉಸಾಬರಿ' ಎಂದು ಎಲ್ಲರೂ ಹೇಳಿದರು. ನನ್ನ ಯಜಮಾನರೂ ಕೂಡ ಇದಕ್ಕೆ ಒಪ್ಪಲಿಲ್ಲ. ನನಗೋ ಮಾಡಬೇಕೋ ಬಿಡಬೇಕೋ ಎನ್ನುವ ಎರಡು ಮನಸ್ಸು. ಒಮ್ಮೆ ನಾಟಕ ನಿಂತು ಹೋದರೂ ಸಾಕು ಎನ್ನಿಸಿತು. ಹಾಗೆಯೇ ಅನಿವಾರ್ಯ ಕಾರಣದಿಂದ ಆಗ ನಾಟಕ ನಿಂತು ಹೋಯಿತು. ಆದರೆ ಅಂಬುಜಮ್ಮ ಹಿಡಿದ ಹಠ ಬಿಡಲಿಲ್ಲ. ಮತ್ತೆ ನಾಟಕಕ್ಕೆ ಎಲ್ಲ ಏರ್ಪಾಡು ಮಾಡಿದರು. ನನಗೋ ವಿಪರೀತ ಭಯ. ಆದರೂ ಜತೆಗೆ ಕೆಟ್ಟ ಕುತೂಹಲ ಬೇರೆ. ರಂಗದ ಮೇಲೆ ಬರುತ್ತಿದ್ದಂತೆ ಗಂಗಾಧರರಾಯರು, ಕೊಟ್ಟೂರಪ್ಪನವರು, ಪುಟ್ಟಸ್ವಾಮಯ್ಯನವರು ಅಭಿನಯಿಸುತ್ತಿದ್ದ ಭೀಮನ ಪಾತ್ರವನ್ನು ನೆನಪಿಗೆ ತಂದುಕೊಂಡು ಅಭಿನಯಿಸಿದೆ. ಮೊದಲ ದೃಶ್ಯ ಮುಗಿಯುತ್ತಿದ್ದಂತೆ ನಾಲ್ಕಾಣೆ ಪ್ರೇಕ್ಷಕರಿಂದ 'ಒನ್ಸ್ ಮೋರ್' ಧ್ವನಿ ಕೇಳಿಬಂತು. ನಾನು ಯಶಸ್ವಿ ಎಂದು ಮನವರಿಕೆಯಾಯಿತು. ನನ್ನನ್ನು ಪ್ರೇಕ್ಷಕರು 'ಭೀಮ' ನಾಗಿ ಸ್ವೀಕರಿಸಿದ್ದರು.

ಇದರ ಯಶಸ್ಸನ್ನು ಗಮನಿಸಿದ ಹಾರ್ಮೋನಿಯಂ ಖ್ಯಾತಿಯ ದೊರೆಸ್ವಾಮಿ ಅನ್ನುವ ಆಪ್ತರು'ನಿನ್ನ ಹೆಸರಲ್ಲೇ ಕಂಪನಿ ತೆಗಿ' ಎಂದು ಒತ್ತಾಯಿಸಿ ಅವರೇ 'ಶ್ರೀ ಸ್ತ್ರೀ ನಾಟಕ ಮಂಡಳಿ' ಎಂಬ ಬೋರ್ಡನ್ನು ಬರೆಸಿ ನೇತು ಹಾಕಿದರು. ನಂತರ ತಿಪಟೂರು, ಕೊಳ್ಳೇಗಾಲ, ಗುಳೇದಗುಡ್ಡ ಎಲ್ಲ ಕಡೆಯೂ ನಮ್ಮದೇ ನಾಟಕ. ನಮ್ಮ ನಾಟಕ ಅಂದ್ರೆ ಜನ ಮುಗಿಬೀಳೋರು. ಮೊದಲು ಲಕ್ಷ್ಮಣ್ ಎನ್ನುವ ಸೀನರಿ ಎಲ್ಲ ಒದಗಿಸ್ತಿದ್ರು. ನಂತರ ನಾನೇ ಅದೆಲ್ಲವನ್ನು ಕೊಂಡುಕೊಂಡೆ. ಒಮ್ಮೆ ಸಾಲಿಗ್ರಾಮದಲ್ಲಿ ನಮ್ಮ 'ಸಂಸಾರ ನೌಕೆ' ನಾಟಕ ನಡೆಯಬೇಕಿತ್ತು. ಆದರೆ ಮಳೆ ಬಿಡದೆ ಬಾರಿಸುತ್ತಿತ್ತು. ನಾಟಕ ನಿಲ್ಲಿಸಲು ನಿರ್ಧರಿಸಿದೆವು. ಆದರೆ ಜನ ಬಿಡಲಿಲ್ಲ. ಮಳೆಯಲ್ಲಿಯೇ ಛತ್ರಿ ಹಿಡಿದು ನಾಟಕ ನೋಡಿದ್ರು. ನಾನು 'ಕೃಷ್ಣ ಗಾರುಡಿ' ಆದರೆ ಭೀಮ, ಕಂಸ, 'ರಾಮಾಯಣ' ದಲ್ಲಿ ದಶರಥ, ರಾವಣ, 'ದಾನಶೂರ ಕರ್ಣ' ದಲ್ಲಿ ದುರ್ಯೋಧನ, 'ಬೇಡರ ಕಣ್ಣಪ್ಪ' ದಲ್ಲಿ ಕಣ್ಣಪ್ಪ, 'ಸದಾರಮೆ' ಯಲ್ಲಿ ಕಳ್ಳ, 'ಸಂಸಾರ ನೌಕೆ'ಯಲ್ಲಿ 'ಸುಂದರ' ಆಗಿ ಅಭಿನಯಿಸ್ತಿದ್ದೆ. ನಮ್ಮ ಕಂಪನಿಗೆ ಸಾಕಷ್ಟು ಬೇಡಿಕೆಯಿತ್ತು. ಎಲ್ಲರೂ ಕರೆಯುವವರು. ಗೌರವದಿಂದ ನಡೆಸಿಕೊಳ್ಳುತಿದ್ರು, ಮಾತನಾಡಿದಷ್ಟು ಹಣ ಕೊಡೋರು. ಮೋಸ ಮಾಡಿದ ಪ್ರಕರಣಗಳು ತೀರಾ ಕಡಿಮೆ. ಹೆಂಗಸರೇ ಆದರೂ ಯಾರ ಕೂದಲು ಕೊಂಕದ ಹಾಗೆ ನಾನು ನೋಡಿಕೊಳ್ಳುತ್ತಿದ್ದೆ. ಅದೆಲ್ಲಾ ಒಳ್ಳೆ ದಿನಗಳೇ. ಆದರೆ ಹದಿನೈದು ವರ್ಷಗಳ ಹಿಂದೆ, ಚಾಮರಾಜನಗರ ಕ್ಯಾಂಪಿನಲ್ಲಿ ಭಾರಿ ಗಾಳಿ ಮಳೆ ಬಂದು ಸೀನರಿಗಳೆಲ್ಲ ಹಾಳಾದವು. ಕಂಪೆನಿಗೆ ಬಹಳಷ್ಟು ನಷ್ಟವಾಯ್ತು. ಅಂದು ಸೊರಗಲು ಆರಂಭವಾದ ನಮ್ಮ ಸ್ತ್ರೀ ನಾಟಕ ಮಂಡಳಿ ಮತ್ತೆ ಚೇತರಿಸಿಕೊಳ್ಳಲೇ ಇಲ್ಲ. ಈಗಲೂ ಕೇವಲ ಅದರ ಜೀವನಾಡಿ ಮಾತ್ರ ಮಿಡಿತಿದೆ. ನಾವು ಕಂಡ ಸುಖಕ್ಕಿಂತ ಕಷ್ಟವೇ ಹೆಚ್ಚು ಎನ್ನಬಹುದು. ಈಗ ಅದೆಲ್ಲವನ್ನೂ ನೆನಪು ಮಾಡಿಕೊಂಡರೆ ನಿಜವಾಗ್ಲೂ ನಾನು ಇಂತಾದನ್ನು ಮಾದಿದ್ದೇನೆಯೇ? ಇಂಥಾ ಸಂಸ್ಥೆ ಇತ್ತೇ? ಅಥವಾ ಇದೆಲ್ಲ ಭ್ರಮೆಯೇ? ಎನ್ನಿಸುತ್ತದೆ." ಎಂದು ನಾಗರತ್ನಮ್ಮ ವಾಸ್ತವಕ್ಕಿಳಿದಾಗ ಅವರ ಮುಖದಲ್ಲಿ ಅಪೂರ್ವವಾದದ್ದೊಂದನ್ನು ಸಾಧಿಸಿದ ಹೆಮ್ಮೆ ಇತ್ತು.

ಗಂಡಸರ ನಾಟಕ ಕಂಪೆನೆಗಳೇ ನೆಲೆ ನಿಲ್ಲಲ್ಲು ಹೆಣಗಾಡುವ ಅಂದಿನ ಪರಿಸ್ಥಿತಿಯಲ್ಲಿ ನಾಗರತ್ನಮ್ಮ ಮಾಡಿರುವ ಸಾಹಸ ಸಾಮಾನ್ಯವಾದದ್ದೇನಲ್ಲ. ಅಷ್ಟೇ ಅಲ್ಲ. ನಾಗರತ್ನಮ್ಮನವರ ಸ್ತ್ರೀ ನಾಟಕ ಮಂಡಲಿಯ ವಿಶೇಷವೆಂದರೆ ದಿನದ ಸಂಬಳ. ಆ ಕಾಲದಲ್ಲಿ ಎಷ್ಟೋ ಖ್ಯಾತಿ ಗಳಿಸಿದ ಗುಬ್ಬಿ ಕಂಪನಿಯಲ್ಲೇ ದಿನದ ಸಂಬಳ ದೊರಕುತ್ತಿದ್ದುದು

ಹಿರಿಯ ಕಲಾವಿದರಾದ ನಾಗೇಶರಾವ್ ಮತ್ತು ಮಳವಳ್ಳಿ ಸುಂದರಮ್ಮ ಇಬ್ಬರಿಗೇ. ಉಳಿದವರಿಗೆಲ್ಲಾ ತಿಂಗಳ ಸಂಬಳವೇ– 'ಶ್ರೀ ಸ್ತ್ರೀ ನಾಟಕ ಮಂಡಲಿ' ಯಲ್ಲಿ ದೊಡ್ಡ ಪಾತ್ರವಾಗಲಿ, ಸಣ್ಣ ಪಾತ್ರವಾಗಲಿ ಎಲ್ಲರಿಗೂ ಅವರವರ ಅರ್ಹತೆಗೆ ತಕ್ಕಂತೆ ದಿನದ ವೇತನ– ತಿಂಗಳ ಮೂವತ್ತು ದಿನವೂ ಇವರ ನಾಟಕ ಖಚಿತ.

ಸುಮಾರು ಎರಡು ಸಾವಿರಕ್ಕೂ ಹೆಚ್ಚು ನಾಟಕ ಪ್ರದರ್ಶನ ನೀಡಿರುವ ಸ್ತ್ರೀ ನಾಟಕ ಮಂಡಳಿಯ ಚಾಲಕ ಶಕ್ತಿ ನಾಗರತ್ನಮ್ಮನವರೇ. ಒಮ್ಮೊಮ್ಮೆ ಇದರಿಂದ ಅವರು ಅನುಭವಿಸಿರುವ ಖಾಸಗಿ ನಷ್ಟ ಬೆಲೆಕಟ್ಟಲಾಗದ್ದು. ಎಂಥಾ ಕ್ಲಿಷ್ಟ ಪರಿಸ್ಥಿತಿಯಲ್ಲೂ ನಾಗರತ್ನಮ್ಮ ಎದೆಗುಂದಿದವರಲ್ಲ. ತಮ್ಮ ಪತಿದೇವರನ್ನು ಕಳೆದುಕೊಂಡಾಗಲೂ ನಾಟಕವನ್ನೇ ಅಪ್ಪಿಕೊಂಡಂತಹ ನಿಷ್ಠೆ ಅವರದು.

ಒಮ್ಮೆ ನಂಜನಗೂಡಿನಿಂದ ಶೃಂಗೇರಿಗೆ ಕ್ಯಾಂಪ್ ಬದಲಾಯಿಸುವ ಸಿದ್ದತೆ ನಡೆಸಿರುವಾಗಲೇ ಮೈಸೂರಿನಲ್ಲಿ ಪಾರ್ಥಸಾರಥಿ ಅವರು ತೀರಿಕೊಂಡ ಸುದ್ದಿ ತಲುಪಿತು. ಮೈಸುರು ತಲುಪಿ ಕಣ್ಣೀರಿನಿಂದ ಕೈ ತೊಳೆಯುತ್ತಿದ್ದಂತೆಯೇ ಮಾವ ನೀಡಿದ ಅಭಯ ಹಾಗೂ ಭಗವದ್ಗೀತೆ ಹೊತ್ತು ಶೃಂಗೇರಿ ತಲುಪಿದ ನಾಗರತ್ನಮ್ಮ ಮತ್ತೆ ಭೀಮನ ಪಾತ್ರದಲ್ಲಿ ವಿಜ್ರಂಭಿಸಿದವರು.

"ಅಂದಿನಂತೆ ನಾನೀಗ ಆ ಪಾತ್ರಗಳನ್ನು ಮಾಡಲಾರೆ. ತಾತ್ಕಾಲಿಕ ರಂಗ ಮಂಚವನ್ನೂ ನಡುಗಿಸುವಂತ ಆ ಪಾತ್ರಗಳನ್ನು ನಾನು ಹೇಗೆ ನಿರ್ವಹಿಸುತ್ತಿದ್ದೆ. ಆ ಗಡಸು ಧ್ವನಿ ನನಗೆ ಎಲ್ಲಿತ್ತು ಎಂಬುದೇ ನನಗೆ ಅರ್ಥವಾಗುತ್ತಿಲ್ಲ. ನಾನು ವಿಶೇಷವಾದ ಆಹಾರ ತೆಗೆದುಕೊಳ್ಳುತ್ತೇನೆಂದು ಕೆಲವರು ಊಹಿಸಿದ್ದರು. ಮಧ್ಯ ಸೇವಿಸುತ್ತೇನೆಯೇ ಎಂಬ ಅನುಮಾನ ಮತ್ತೆ ಕೆಲವರಿಗೆ. ಏಕೆಂದರೆ ಭೀಮನ ಪಾತ್ರಕ್ಕೆ ಆಗಿನ ಕಾಲದಲ್ಲಿ ಹೆಸರುವಾಸಿಯಾದ ಗಂಗಾಧರರಾಯರು ರಂಗಮಂಚ ಹತ್ತುವ ಮುನ್ನ 40 ಇಡ್ಲಿ, ಒಂದು ದೊಡ್ಡ ಪಾತ್ರೆ ಹಾಲು ಕುಡಿಯುತ್ತಿದ್ದರು. ನಾನು ಇದೇನೂ ಇಲ್ಲದೇ ಸಾಧಾರಣ ಊಟ ಕಾಫಿ ಮಾತ್ರ ತೆಗೆದುಕೊಳ್ಳುತ್ತಿದ್ದೆ." ಎನ್ನುವ ನಾಗರತ್ನಮ್ಮ ಈಗ ಹೆಚ್ಚಿನ ಪ್ರದರ್ಶನ ನೀಡಲಾಗುತ್ತಿಲ್ಲ. ಹಳೆಬರನ್ನೇ ಕೆಲವರನ್ನು ಒಟ್ಟು ಸೇರಿಸಿ ಹೊಸಬರು ಕೆಲವರನ್ನು ಸೇರಿಸಿಕೊಂಡು ಆಗಾಗ ಪ್ರದರ್ಶನ ನೀಡುತ್ತಾರೆ. ಆದರೆ ಈಗ ಆ ಹಿಂದಿನ ವೈಭವವೆಲ್ಲ ಮಾಯ.

"ಈಗುಳಿದಿರುವುದು ಕೇವಲ ನೆನಪು ಮಾತ್ರ, ಮತ್ತೆ ಅಂಥಾದೊಂದು ಯುವ ಸೃಷ್ಟಿಯಾಗಲು ಸಾಧ್ಯವಾಗೊಲ್ಲ." ಎನ್ನುವ ನಾಗರತ್ನಮ್ಮನವರ ಮಾತು ನೂರಕ್ಕೆ ನೂರರಷ್ಟು ನಿಜ, ಮೂಕಿ ಬಂದಾಗ ಸೊರಗಿದ ವೃತ್ತಿಪರ ರಂಗಭೂಮಿ ಟಾಕಿ ಬಂದಾಗ ನಿಧಾನವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು. ಈಗಂತೂ ಮಾಲಶ್ರೀ, ವಿದ್ಯಾಶ್ರೀ ಯರ ಭರಾಟೆಯಲ್ಲಿ ಅಂಥಾದೊಂದು ಜಗತ್ತಿತ್ತು ಎಂಬುದೇ ಇಂದಿನ ಜನಾಂಗಕ್ಕೆ ಅರಿವಿಲ್ಲದಂತಾಗಿದೆ. ಅಲ್ಪ ಆದಾಯ, ಅನಿಶ್ಚಿತ ಬದುಕು, ನಾಟಕದವರು ಅಂದರೆ ಪರಿತ್ಯಕ್ತ ಜೀವಿ ಎಂಬ ಭಾವನೆಯಿಂದ ವೃತ್ತಿಪರ ರಂಗಭೂಮಿಯನ್ನು ಅವಲಂಬಿಸುವವರ ಸಂಖ್ಯೆ ಕಡಿಮೆಯಾಯಿತು. ಈಗೇನಾಗಿದೆಯೆಂದರೆ ಜನ ಸಿನಿಮಾ ನೋಡುವ ಕಣ್ಣಲ್ಲೇ ನಾಟಕ ನೋಡಲು ಬಯಸುತ್ತಾರೆ. ಆದರೆ ರಸಾನುಭವಗಳೇ ಬೇರೆ. ರಂಗಭೂಮಿಯಲ್ಲಿ ಕಣ್ಣು ,ಕಿವಿ ಎರಡೂ ಜಾಗೃತವಾಗಿರಬೇಕು. ಆದರೆ ಸಿನಿಮಾದಲ್ಲಿ ಹಾಗಲ್ಲ. ಇದನ್ನು ಪ್ರೇಕ್ಷಕರು ಅರ್ಥಮಾಡಿಕೊಳ್ಳದ ಕಾರಣ ರಂಗಭೂಮಿ ರಾಹುಗ್ರಸ್ತವಾಯಿತು. ಕಂಪನಿಗಳು ಬಡವಾದವು, ಅಸ್ಥಿರವಾದವು, ನಟನಟಿಯರು ಕಂಪನಿ ಬಿಟ್ಟು ಬೇರೆಡೆಗೆ ಹೋಗಲು ಆರಂಭಿಸಿದರು, ನಾಟಕಗಳು ಯಶಸ್ವಿಯಾಗಲು ಸೂಕ್ತ ತರಬೇತಿ ಅನುಕೂಲಗಳು ಇಲ್ಲದೇ ಹೋದವು. ಇವೆಲ್ಲ ಸೇರಿಕೊಂಡು ವೃತ್ತಿರಂಗಭೂಮಿಯ ಅವನತಿ ಆರಂಭವಾಯಿತು. ದೃಶ್ಯದಲ್ಲೂ ವೈಭವ ತೋರಿಸಲಿಕ್ಕಾಗಲಿಲ್ಲ. ಸಂಗೀತದಲ್ಲೂ ಸಾಧ್ಯವಾಗಲಿಲ್ಲ. ಹಾಸ್ಯ ಅನ್ನೋದಂತೂ ತೀರ ಕೆಳಮಟ್ಟಕ್ಕಿಳಿಯಿತು. ಮಾತಿನಲ್ಲಿ ಕಟ್ಟುವ ಹಾಸ್ಯ ಅದು. ಹಾಗಾಗಿ ಎಲ್ಲ ವೃತ್ತಿರಂಗಭೂಮಿಯನ್ನು ಅಮರಿಕೊಂಡ ಸೋಲು 'ಸ್ತ್ರೀ ನಾಟಕ ಮಂಡಳಿ' ಯನ್ನೂ ತಬ್ಬಿಕೊಂಡಿತು.

ಹಾಗೆ ತಮ್ಮ ಖ್ಯಾತಿಯ ಕಾಲ ಮುಗಿದು ಹೋಯಿತೆಂದು ನಾಗರತ್ನಮ್ಮನವರಲ್ಲಿ ಬೇಸರವಿಲ್ಲ. ನೋವಿಲ್ಲ. ಬದಲಾದ ಪರಿಸರವನ್ನು ಅವರು ಆತ್ಮೀಯತೆಯಿಂದಲೇ



ಕಂಡಿದ್ದಾರೆ. ಹೊಸ ಹೊಸ ಬೆಳವಣಿಗೆಗಳನ್ನು ಕುತೂಹಲದಿಂದಲೇ ಗಮನಿಸುತ್ತಿದ್ದಾರೆ. ಇತ್ತೀಚಿಗೆ ದೂರದರ್ಶನ ಧಾರಾವಾಹಿಗಳಾಗಿ ಪ್ರಸಾರವಾದ 'ರಾಮಾಯಣ', 'ಮಹಾಭಾರತ'ದ ಪಾತ್ರಗಳ ಬಗ್ಗೆ ಅವರನ್ನು ಕೆಣಕಿದರೆ "ಆ ಧಾರಾವಾಹಿಗಳನ್ನು ನೋಡಿದಾಗ ನನ್ನ ಮನಸ್ಸು ಹಿಂದಕ್ಕೆ ಜಿಗಿಯಿತು. ನಾಗೇಶರಾಯರು, ಗಂಗಾಧರರಾಯರು ಅಭಿನಯಿಸಿದ ಕೃಷ್ಣನ ಪಾತ್ರ ಮನಸ್ಸಿಗೆ ಬಂತು. ಕೊಟ್ಟೂರಪ್ಪನವರ ಭೀಷ್ಮನ ಪಾತ್ರದ ಅಭಿನಯ ತೇಲಿಬಂತು. ಆ ಕಾಲದಲ್ಲಿ ಭೀಷ್ಮಯೆಂದರೆ ಅವರ ಹೊರತು ಇನ್ಯಾರೂ ಇರಲಿಲ್ಲ. ಭೀಷ್ಮನ ಪಾತ್ರಕ್ಕಾಗಿಯೇ ಹೇಳಿ ಮಾಡಿಸಿದಂಥಾ ವ್ಯಕ್ತಿಯವರು. ದೂರದರ್ಶನದ 'ಮಹಾಭಾರತ' ದ ಭೀಷ್ಮ ಕೂಡ ಚೆನ್ನಾಗಿ ಮಾಡಿದರು. ನನಗೆ ಅವರ ಅಭಿನಯ ತುಂಬಾ ಹಿಡಿಸಿತು. ಆದರೆ ಮೀಸೆಯಿಲ್ಲದ ಭೀಮನನ್ನು ನೋಡಲು ನನ್ನಿಂದ ಸಾಧ್ಯವಾಗಲಿಲ್ಲ." ಎನ್ನುತ್ತಾರೆ.

ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಬರುವ ಮೊದಲು ನಾಗರತ್ನಮ್ಮನವರಿಗೆ 'ರಾಜ್ಯೋತ್ಸವ ಪ್ರಶಸ್ತಿ', 'ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ' ಬಂದಿವೆ. ಅರಸು ಅವರ ಆಡಳಿತಾವಧಿಯಲ್ಲಿ ಅವರಿಗೆ ಗೌರವ ಧನವೂ ಮಂಜೂರಾಗಿದೆ. ದೊರೆತಿರುವ ಈ ಪ್ರಶಸ್ತಿಯಿಂದ "ಜನ ನನ್ನನ್ನು ಮರೆತಿಲ್ಲ" ಎಂಬುದು ಅವರಿಗೆ ಸಂತಸವಾಗಿದೆ.

ಹಳೆಯ ಸ್ತ್ರೀ ನಾಟಕ ಮಂಡಳಿ ವೈಭವವನ್ನೂ ಇತಿಹಾಸದ ಗತ ವೈಭವದ ಗುರುತಾಗಿಯಾದರೂ ಉಳಿಯುವಂತೆ ಅವರು ಶ್ರಮ ವಹಿಸುತ್ತಿದ್ದಾರೆ. ಈ ಅವರ ಕೆಲಸದಲ್ಲಿ ಅವರ ತಮ್ಮ ಪರಮೇಶ್ವರ, ತಂಗಿ ಮಂಜುಳ, ನೆರವಾಗುತ್ತಿದ್ದಾರೆ. ತಮ್ಮ ಬಾಳ ಸಂಜೆ ಯಲ್ಲೂ ಅವರು ವೃತ್ತಿರಂಗಭೂಮಿಯ ಗೌರವವನ್ನು ಕಾಯುವ ಕಾಯಕದಲ್ಲಿ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ. ಭಾರತದಲ್ಲೇ ಏಕೈಕ ಎನ್ನುವ ಸ್ತ್ರೀ ನಾಟಕ ಮಂಡಳಿಯನ್ನು ಕರ್ನಾಟಕದ ಭವ್ಯ ಪರಂಪರೆಯ ಒಂದು ಭಾಗವೆನ್ನುವಂತೆ ಜೀವಂತ ವಾಗಿರಿಸುವ ಅವರ ಪ್ರಯತ್ನ ಸಫಲವಾದಿತೇ?

❑



# ಜಾನಪದದಲ್ಲಿ ಮಹಿಳಾ ಪ್ರತಿನಿಧಿತ್ವ

■ಪ್ರೊ. ಶಿವಾನಂದ ಬ. ಟವಳಿ

ನಮ್ಮ ಸಂಸ್ಕೃತಿ ಜನಾಂಗದ ಜೀವಾಳವಾದ ಜಾನಪದದಲ್ಲಿ ಅಡಗಿದೆ. ಜಾನಪದವು ಬದುಕಿನೊಂದಿಗೆ ಬೆಸೆದುಕೊಂಡು ಬಂದಿದ್ದು, ಕ್ರಿಯಾಶೀಲವಾದದ್ದು. ಸಾವಿರಾರು ವರ್ಷಗಳಿಂದ ಬೆಳಗುವ ಸೂರ್ಯನಂತೆ ಜಾನಪದ ಇಂದಿಗೂ ಜೀವಂತ. ಜಾನಪದ ಕೇವಲ ಮನರಂಜನೆಯ ಸರಕಲ್ಲ. ನಿರ್ದಿಷ್ಟ ಜೀವನ ವಿಧಾನ, ಕಲೆ, ಸಾಹಿತ್ಯ, ಕುಣಿತ ಇದರಲ್ಲಿಲ್ಲ. ಹಲವಾರು ವರ್ಷಗಳಿಂದ ಬೆಳೆದುಬಂದ ಸಂಸ್ಕೃತಿ, ಅರಿವು, ಜ್ಞಾನವಿದೆ.

ಮಾನವನ ನಾಗರೀಕತೆಗೆ ಸಂಸ್ಕೃತಿಗೆ ಮಹಿಳೆಯರ ಕೊಡುಗೆ ಅನನ್ಯವಾದುದು. ತಾಯಿ, ತಂಗಿ, ಹೆಂಡತಿ, ಮಗಳಾಗಿ ಸಮಾಜದಲ್ಲಿ ಪುರುಷನೊಂದಿಗೆ ಸಹಜೀವನ ನಡೆಸುವವಳು. ಬದುಕಿನ ಎಲ್ಲ ನಲಿವು-ನೋವುಗಳನ್ನು ಅನುಭವಿಸುವವಳು. ಮನುಕುಲದ ಸಮಾಜ ರಚನೆಯಲ್ಲಿ ಮಹಿಳೆಯ ಪಾತ್ರ ಅನನ್ಯವಾದುದು. ಕುಟುಂಬದ ಮೂಲ ಸೆಲೆಯು ಹೆಣ್ಣೇ. ಅಂತೆಯೇ ಕವಿ ಸರ್ವಜ್ಞ **'ಹೆಣ್ಣಿನಿಂದಲೇ ಇಹವು । ಹೆಣ್ಣಿನಿಂದಲೇ ಪರವು ।'** ಎಂದು ನುಡಿದಿದ್ದಾನೆ. ಮಹಿಳೆಯು ತನ್ನ ಬದುಕಿನ ಸಂತೋಷ, ನಲಿವು, ಸಣ್ಣತನ, ಹೊಟ್ಟೆಕಿಚ್ಚು, ಕ್ಷುಲ್ಲಕಗುಣ, ನೋವು, ಉದಾರತೆ ಮುಂತಾಗಿ ಭಾವನೆಗಳನ್ನು ಗೀತೆ-ಕಥೆಗಳ ಮೂಲಕ, ಸೃಜನಶೀಲತೆಯನ್ನು ವ್ಯಕ್ತಪಡಿಸಿದ್ದಾಳೆ.

ಋಗ್ವೇದದ ಕಾಲದಿಂದಲೂ ಭಾರತೀಯ ಸಮಾಜದಲ್ಲಿ ಮಹಿಳೆಯರಿಗೆ ಗೌರವವಿತ್ತು. ಕುಟುಂಬದ ಎಲ್ಲ ಧಾರ್ಮಿಕ ಕಾರ್ಯಗಳಲ್ಲಿ ಅವಳಿಗೆ ಅವಕಾಶಗಳಿದ್ದವು. ಲೋಪಾಮುದ್ರೆ, ಗಾರ್ಗಿ, ಮೈತ್ರೇಯಿ ಮೊದಲಾದವರು ತಮ್ಮನ್ನು ತಾತ್ವಿಕ ಜಿಜ್ಞಾಸೆಯಲ್ಲಿ ತೊಡಗಿಸಿಕೊಂಡದ್ದು ಕಂಡು ಬರುತ್ತದೆ. ಅಂತೆಯೇ **'ಯತ್ರ ನಾರ್ಯಸ್ತು ಪೂಜ್ಯಂತೆ ತತ್ರ ದೇವತಾ ರಮಂತೇ'** ಎಂದು ನಂಬಿದ್ದ ಕಾಲವದು. ಶಿಷ್ಟ ಸಮಾಜದಂತೆ ಜನಪದ ಸಮಾಜವು ಮಹಿಳೆಯರ ಬಗೆಗಿನ ಮೌಲ್ಯಾದರ್ಶಗಳನ್ನು ಉಳಿಸಿಕೊಂಡಿವೆ. ಮಾತೃವಂಶೀಯ ಸಮಾಜದಲ್ಲಿ ಹೆಣ್ಣಿಗೆ ಇಂದಿಗೂ ವಿಶೇಷ ಗೌರವವಿದೆ. ಗಾರೋ ಪರ್ವತ ಪ್ರದೇಶ ದಲ್ಲಿರುವ ಖಾಸೀ ಜನಾಂಗ, ಮಾತೃ ಪ್ರಧಾನ ಕುಟುಂಬಗಳನ್ನು ಇಂದಿಗೂ ಹೊಂದಿದೆ. ತುಳುನಾಡಿನ ಪಾಡ್ದನಗಳು ಮಾತೃವಂಶೀಯ ಸಂಕಥನಗಳನ್ನು ನಿರೂಪಿಸುತ್ತವೆ. ಮೌಖಿಕ ಪರಂಪರೆಯಲ್ಲಿ ಜೀವಂತ ವಾಗಿರುವ ಮಹಿಳಾ ಜನಪದ ಸಾಹಿತ್ಯದಲ್ಲಿ ಅವಳ ಜೀವನಾನುಭವ ಗಟ್ಟಿಗೊಂಡು ಗೀತೆ, ಲಾವಣಿ, ಕಥೆ, ಒಡಪು-ಒಗಟು ಮುಂತಾದ ಪ್ರಕಾರಗಳಲ್ಲಿ ಸತ್ವಪೂರ್ಣವಾಗಿ ಅಭಿವ್ಯಕ್ತಗೊಂಡಿವೆ.

### ಜಾನಪದದಲ್ಲಿ ಮಹಿಳಾ ಪ್ರತಿನಿಧಿತ್ವ

ಯಾವುದೇ ಒಂದು ಸಮಾಜದ ವಾಚಿಕ ಪರಂಪರೆಗಳ ಕಲೆ, ಸಂಸ್ಕೃತಿ, ನಂಬಿಕೆಗಳ ಮೊತ್ತವೇ ಆಯಾ ಜನಾಂಗದ ಜಾನಪದ. ಜಾನಪದರಲ್ಲಿ ಹೆಣ್ಣು-ಗಂಡೆಂಬ ಭೇದವಿಲ್ಲ. ಪಿತೃ ಪ್ರಧಾನ ಕುಟುಂಬಗಳೇ ಹೆಚ್ಚಾಗಿದ್ದರೂ ಮಹಿಳೆಯರಿಗೆ ಅತ್ಯಂತ ಗೌರವವಿದೆ. ಭೂಮಿಯ ಮೇಲೆ ಸಂಸಾರ ನಡೆಸಲು ಬಂದ ಸ್ವರ್ಗದ ದೇವತೆಯೇ ಹೆಣ್ಣು ಎಂಬುದು ಜನಪದರ ಪ್ರಬಲವಾದ ನಂಬಿಕೆ. ಹಾಗಾಗಿ ಅವಳನ್ನು **'ಗೃಹದೇವತೆ'** ಎಂದು ಗೌರವದಿಂದ ಸಂಬೋಧಿಸಲಾಗಿದೆ. ಹೆಣ್ಣಿರದ ಜೀವನ ಮರುಭೂಮಿಯಲ್ಲಿ ವಾಸಿಸದಂತೆ. ಹೆಣ್ಣು ಬದುಕಿನ ಕಣ್ಣು. ಅವಳು ಬದುಕಿನ ಪ್ರತಿಯೊಂದು ಕ್ಷಣಗಳನ್ನು ರಸಮಯವನ್ನಾಗಿಸಲು ಶ್ರಮಪಡುತ್ತಾಳೆ. ನಿತ್ಯ ಜೀವನದಲ್ಲಿ ತಾನು ಮಾಡುವ ಕಾಯಕದಲ್ಲಿ ಬೇಸರಿಕೆ ಬಂದಾಗ, ಅವಳು ಹಾಡು ಕಥೆಗಳನ್ನು ಹೇಳುವ ಮೂಲಕ ಪುನರುತ್ಸಾಹ ಹೊಂದುವಳು. ತೊಟ್ಟಿಲು ತೂಗುವಾಗ, ರಾಗಿ ಬೀಸುವಾಗ, ನಾಟಿಯ ಹಚ್ಚುತ್ತಾ, ಬಟ್ಟೆ ನೇಯುತ್ತಾ, ಧಾನ್ಯ ಕುಟ್ಟುತ್ತಾ ಹೀಗೆ ಸಂತೋಷದಿಂದ ಕುಣಿವಾಗ, ದುಃಖದಿಂದ ಅಳುವಾಗ ಜೀವನದ ಪ್ರತಿ ಹಂತದಲ್ಲೂ ಜೀವದ ಉಸಿರಂತೆ **'ಜಾನಪದ'** ಜನಪದರ ಅದರಲ್ಲೂ ಮಹಿಳೆಯರ ಉಸಿರಾಗಿದೆ. ಸಮಾಜದಲ್ಲಿ ಮಹಿಳೆಯು ತಾಯಿ, ತಂಗಿ, ಅಕ್ಕ, ಪತ್ನಿ, ಮಗಳು, ಗೆಳತಿಯಾಗಿ ಜೀವನವನ್ನು ಅನುಭವಿಸಿ, ತಾನು ಕಂಡ ಸಮಾಜವನ್ನು ಮೌಖಿಕ ಪರಂಪರೆಯಲ್ಲಿ ಕಂಡಿರುವ ಬಗೆಯನ್ನು ಕೆಳಕಂಡಂತೆ ಗಮನಿಸಬಹುದು.

### ತಾಯಿಯಾಗಿ ಮಹಿಳೆ

ಜನಪದ ಮಹಿಳೆ ತಾಯಿಯಾಗಿ ತನ್ನ ಮಕ್ಕಳ ಬಗೆಗೆ ಅಪಾರ ಪ್ರೇಮ, ಮಮತೆ, ವಾತ್ಸಲ್ಯ ಮುಂತಾದ ಗುಣಗಳನ್ನು ಹೊಂದಿದ್ದಾಳೆ. ಹೆಣ್ಣಿಗೆ ಮಕ್ಕಳೇ ಸರ್ವಸ್ವ, ಮಕ್ಕಳಿಗಿಂತ ದೊಡ್ಡ ಸಂಪತ್ತು ಅವಳಿಗೆ ಬೇರೊಂದಿಲ್ಲ. ಹಲವು ದೇವರನ್ನು ಬೇಡಿ ಪಡೆದ ಮಕ್ಕಳನ್ನು ಬಹುಜತನದಿಂದ ಕಾಪಾಡುವಳು.

**ಅತ್ತರೆ ಅಳಲೆವ್ವ ಈ ಕೂಸು ನನಗಿರಲಿ ।**
**ಕೆಟ್ಟರ ಕೆಡಲಿ ಮನಿಗೆಲಸ । ಕಂದನಂಥ**
**ಮಕ್ಕಳಿರಲೆವ್ವ ಮನಿತುಂಬ ॥**

**'ಮಕ್ಕಳಿದ್ದರೆ ಮನೆಚಂದ'** ಎಂಬ ನಂಬಿಕೆ ಅವಳಲ್ಲಿ. ಆ ಕಾರಣ ತನ್ನ ಮಗ ಎಷ್ಟೇ ಅತ್ತರೂ, ಕಾಡಿದರೂ ಆ ಮಗುವೇ ನನಗೆ ಬೇಕು ಎನ್ನುವ ಭಾವ. ಜೊತೆಗೆ ಮನೆಕೆಲಸ ಕೆಟ್ಟರೆ ಕೆಡಲಿ, ಆದರೆ ಅಂತಹ ಮಕ್ಕಳೇ ನನಗೆ ಬೇಕು. ಮಗ ಒಳ್ಳೆಯನಾಗಲಿ ಜಗಕ್ಕೆ ಜ್ಯೋತಿಯಾಗಲಿ

ಎಂದು ಹರಸುವ ಭಾವ ಅವಳಲ್ಲಿದೆ. ಬಡತನವು ತನ್ನೊಂದಿಗೆ ಕೊನೆಗೊಂಡು ನನ್ನ ಮಕ್ಕಳಿಗೆ ಸಿರಿತನ ಬರಲಿ ಎಂದು ಹಾರೈಸುವ ಮನಸ್ಸು ಅವಳಲ್ಲಿದೆ.

**ತಾಯಿದ್ರ ತವರ್ಹೆಚ್ಚು ತಂದಿದ್ರ ಬಳಗ್ಹೆಚ್ಚು ।**
**ಸಾವಿರಕೆ ಪತಿಪುರುಷ । ಹೊಟ್ಟೀಯ**
**ಮಾಣಿಕದ ಹರಳು ಮಗಹೆಚ್ಚು ॥**

**'ಮಾಣಿಕ್ಯದ ಹರಳು'** ಎಂದು ತನ್ನ ಮಗನನ್ನು ತಾಯಿ ವರ್ಣಿಸುತ್ತಾಳೆ. ಹೆತ್ತ ತಂದೆ-ತಾಯಿಗಿಂತ, ಕೈ ಹಿಡಿದ ಪತಿಗಿಂತ ಅವಳಿಗೆ ಕರುಳು ಕುಡಿಯಾದ ಮಗನೇ ಹೆಚ್ಚು ಎಂದು ಇಲ್ಲಿ ಅಭಿವ್ಯಕ್ತಿಸಿದ್ದಾಳೆ. ಮಗನಿದ್ದರೆ ತವರು, ಬಂಧು-ಬಳಗವನ್ನು ಮರೆಯುವ ಗುಣ ತಾಯಿಯಲ್ಲಿ ಕಂಡು ಬಂದಿದೆ.

### ಅಕ್ಕ-ತಂಗಿಯಾಗಿ ಮಹಿಳೆ

ಮನುಷ್ಯನ ಸಂಬಂಧಗಳ ನೆಲೆ ವಿಭಿನ್ನ. ಅಣ್ಣ-ತಮ್ಮ, ಅತ್ತೆ-ಮಾವ, ಅಕ್ಕ-ತಂಗಿ ಮೊದಲಾದವರೊಡನೆ ಜೀವನ ನಡೆಸಬೇಕಾಗುತ್ತದೆ. ಜನಪದರು ಸಂಬಂಧದ ಸುಖ-ದುಃಖ ಬಲ್ಲವರು. ಮಹಿಳೆಯು ಅಕ್ಕ ಹಾಗೂ ತಂಗಿಯಾಗಿ ತವರನ್ನು ಹರಸುವ, ಅಣ್ಣ ತಮ್ಮನನ್ನು ಪ್ರೀತಿಯಿಂದ ಕಾಣುವ ಆದರ್ಶವನ್ನು ಜಾನಪದದಲ್ಲಿ ಅಭಿವ್ಯಕ್ತಿಸಿದ್ದಾಳೆ.

**ತಾವರಿಯ ಗಿಡಹುಟ್ಟಿ ದೇವರಿಗಿ ನೆರಳಾಗಿ ।**
**ನಾ ಹುಟ್ಟಿ ಮನಿಗಿ ಎರವಾದ । ನನ ತಮ್ಮ**
**ತಾ ಹುಟ್ಟಿ ಮನಿಗಿ ಧನಿಯಾದ ॥**

ಅಕ್ಕ ಇಲ್ಲಿ ತಮ್ಮನ ಗುಣಗಾನ ಮಾಡುವಳು. ತಾನು ಹುಟ್ಟಿದ ಮನೆಗೆ ಒಡೆಯನಾಗಿ, ಎಲ್ಲ ಬಂಧುಗಳನ್ನು ನೆರಳಂತೆ ತಮ್ಮ ಸಲುತ್ತಿರುವನು ಎಂದು ಅಕ್ಕ ಹೆಮ್ಮೆಯಿಂದ ನುಡಿಯುತ್ತಿದ್ದಾಳೆ. ಜನಪದ ಗೀತೆಗಳಲ್ಲಿ ಚಿತ್ರಿತವಾಗಿರುವ ಸಹೋದರ ಪ್ರೀತಿ ಅಪೂರ್ವವಾದುದು. ಮದುವೆಯಾಗಿ ಹುಟ್ಟಿದ ಮನೆ ಬಿಟ್ಟು ಹೋದ ಹೆಣ್ಣು ಮಗಳು ತವರಿಗೆ ಹರಸುವ ಸಂಪ್ರದಾಯ ಒಡಮೂಡಿದೆ.

**ತಂಗೀಗಿ ಕಳುವ್ಯಾನ ತೆವರೆರಿ ನಿಂತಾನ ।**
**ಅಂಗೀಲಿ ನೀರು ವರಸ್ಯಾನ । ನನ್ನಣ್ಣ**
**ಇಂದೀಗಿ ತಂಗಿ ಎರವಂದಾ ॥**

ಕೂಡಿ ಬೆಳೆದ ಅಣ್ಣ-ತಂಗಿ ಅಗಲುವ ಸಂದರ್ಭ. ಅದು ತಂಗಿ ಮದುವೆಯಾಗಿ ಗಂಡನ ಮನೆಗೆ ಹೋಗುವಾಗ, ಅಣ್ಣನು ತಂಗಿಯನ್ನು ಬೀಳ್ಕೊಟ್ಟು ಅವಳ ಮರೆಯಿಂದ ಅಳುತ್ತಿದ್ದಾನೆ. ಅದನ್ನು ಕಂಡ ತಂಗಿ ನೋವನ್ನು ಸಹಿಸಲಾರದೇ ಗೀತೆಯ ಮೂಲಕ ಸಂಕಟ ವ್ಯಕ್ತಪಡಿಸುವ ಪ್ರಸಂಗ ಮನ ಮಿಡಿಯುವಂತಿದೆ.

### ಮಗಳಾಗಿ ಮಹಿಳೆ

ಜನಪದ ಹೆಣ್ಣು ತಂದೆ-ತಾಯಿಯನ್ನು ಅಪಾರವಾಗಿ ಗೌರವಿಸುತ್ತಾಳೆ. ಹೆತ್ತು, ಹೊತ್ತು, ಪಾಲನೆ ಮಾಡಿದವರೇ ಅವಳಿಗೆ ಸರ್ವಸ್ವ. ಸಮಾಜ ವಿಸ್ತಾರವಾದುದು. ಬಂಧು-ಬಳಗವು ಹೆಚ್ಚು. ಆದರೆ ಯಾರು ಹೆತ್ತ ತಂದೆ-ತಾಯಿಯಂತಾಗಲಾರರು. ಅಂತೆಯೇ ಅವರ ಬಗೆಗೆ ಅಪಾರ ಪ್ರೇಮ, ಮಮಕಾರ, ಭಕ್ತಿ, ಗೌರವಾಧರಗಳನ್ನು ಉಳ್ಳವಳಾಗಿದ್ದಾಳೆ.

**ತಂದೆಯ ನೆನೆದರ ತಂಗುಳ ಬಿಸಿಯಾಯ್ತು ।**
**ಗಂಗಾದೇವಿ ನನ್ನ ಹಡೆದವ್ವ । ನೆನೆದರ**
**ಮಾಸಿದ ತಲೆಯು ಮಡಿಯಾಯ್ತು ॥**

ಗಂಡನ ಮನೆಯಲ್ಲಿ ತಂಗುಳನ್ನದ ತಟ್ಟೆಯ ಮುಂದೆ ಕುಳಿತವಳಿಗೆ ತಂದೆಯ ನೆನಪು ಉತ್ಸಾಹ ತರುತ್ತದೆ. ಗಂಡನ ಮನೆಯ ಕಷ್ಟಗಳನ್ನೆಲ್ಲ ಮರೆಸುತ್ತದೆ. ಹೆತ್ತ ತಾಯಿಯನ್ನು ನೆನೆದರೆ ಮಾಸಿದ ತಲೆಯೂ ಮಡಿಯಾಗುತ್ತದೆ. ತಾಯಿಯನ್ನು **'ಗಂಗಾದೇವಿ'** ಎಂದು ಕರೆದಿರುವುದು ಅರ್ಥಪೂರ್ಣವಾಗಿದೆ. ಭಾರತೀಯರ ಪಾವಿತ್ರ್ಯಗುಣಗಳು ಇಲ್ಲಿ ಒಡಮೂಡುತ್ತದೆ.

**ಹೆಣ್ಣು ಮಕ್ಕಳ ಕಳುವಿ ನೀರು ತಂದು ।**
**ಸಣ್ಣ ಸಲ್ಲೆದಲೆ ಮುಸುಕ್ಹಾಕಿ । ಹಡೆದಪ್ಪ**
**ಹೆಣ್ಣು ಸಾಕೆಂದ ಜಲುಮಾಕ ॥**

ಹತ್ತಾರು ವರ್ಷ ತಂದೆ ತಾಯಿಯರ ಮಮತೆಯಲ್ಲಿ ಬೆಳೆದ ಹೆಣ್ಣು ಹಠಾತ್ತನೆ ಅಗಲುವಾಗ ತಂದೆಗೆ ಆಗುವ ನೋವನ್ನು ಮಗಳು ವ್ಯಕ್ತಪಡಿಸಿದ್ದಾಳೆ. ಗಂಡನ ಮನೆಗೆ ಮಗಳು ಹೋಗುವಾಗ ತಂದೆ, ಕಣ್ಣೀರಿಡುತ್ತಾ, ತನ್ನ ವಸ್ತ್ರದಲ್ಲಿ ಕಣ್ಣೊರೆಸುವ ಭಾವ ಹೃದಯಂಗಮ ಎನಿಸುತ್ತದೆ. ಮಹಿಳೆಯರ ಮನದ ಮಾತು ಇದಾಗಿದೆ.

### ಪತ್ನಿಯಾಗಿ ಮಹಿಳೆ

ಕುಟುಂಬದಲ್ಲಿ ಪತಿ-ಪತ್ನಿಯ ದಾಂಪತ್ಯ ಜೀವನ ಮುಖ್ಯವಾದುದು. ಇವರನ್ನು ಮರಣ ಪರ್ಯಂತ ಒಂದುಗೂಡಿಸುವ ಶಕ್ತಿ ಪ್ರೇಮ. ಜನಪದರಲ್ಲಿ ಪ್ರೇಮ ನಿಷ್ಕಪಟ ನೆಲೆಯುಳ್ಳದ್ದು. ಪರಸ್ಪರ ಒಬ್ಬರನ್ನೊಬ್ಬರು ಬಿಟ್ಟಿರಲಾರದ ಗಾಢವಾದ ಬೆಸುಗೆ ಮದುವೆ. ಮದುವೆಯ ನಂತರ ಪತ್ನಿಗೆ ಪತಿಯೇ ಸರ್ವಸ್ವ. ಮಹಿಳೆ ತಾನು ಪತ್ನಿಯಾಗಿ ಪತಿಯಿನ್ನು ಕಂಡ ಬಗೆ ಇಂತಿದೆ.

**ಹಾಸಿಗಿ ಹಾಸೆಂದಾ ಮಲ್ಲಿಗಿ ಮುಡಿಯೆಂದಾ ।**
**ಬ್ಯಾಸತ್ತರ ಮಡದಿ ಮಲಗೆಂದಾ । ನನ ರಾಯಾ**
**ತನ ನೋಡಿ ತವರ ಮರಿಯೆಂದಾ ॥**

ತನ್ನನ್ನು ಅತಿಯಾಗಿ ಪ್ರೀತಿಸುವ ಪತಿಯನ್ನು ಕುರಿತು ರಚಿಸಿದ ಗೀತೆ. ಮನೆಗೆಲಸ ಮಾಡಿ ಮಡದಿ, ಬೇಸತ್ತಿದ್ದಾಳೆ ಎಂಬುದನ್ನು ಅರಿತು ಸಂತೈಸುತ್ತಿದ್ದಾನೆ. ಮನೆಯ ಕಾರ್ಯಭಾರ ಅವಳಿಗೆ ಹೆಚ್ಚಾಗಿದ್ದನ್ನು ಕಂಡು ಇರುವ ನೋವನ್ನೆಲ್ಲ ನನ್ನ ನೋಡಿ ಮರೆತುಬಿಡು. ತವರಿನ ನೆನಪಾದರೆ ಅದನ್ನು ಮರೆತುಬಿಡು ಎಂದು ಹೇಳುತ್ತಿದ್ದಾನೆ ಪತಿರಾಯ ಎಂದು ಪ್ರೀತಿಯನ್ನು ಮೆಲುಕು ಹಾಕುತ್ತಿದ್ದಾಳೆ.

**ಕಟ್ಟಾಣಿ ಗುಂಡೀಗಿ ಸಿಟ್ಟು ಮಾಡಲೀಬ್ಯಾಡ ।**
**ಬಿಟ್ಟು ಬಂದೀನಿ ಬಳಗೆಲ್ಲ । ಪತಿಪುರುಷ**
**ಕಟ್ಟ್ಯಾರ ತಮ್ಮ ಪದರಾಗ ॥**

ಕೈ ಹಿಡಿದ ಪತಿಗೆ ಸಿಟ್ಟು ಮಾಡಿಕೊಳ್ಳಬೇಡ ಎಂದು ಜನಪದ ಮಹಿಳೆ ವಿನಂತಿಸಿ, ಪತಿಯು ತನ್ನನ್ನು ಅಂಗೈ ಅರಗಿಣಿಯಂತೆ ಕಾಪಾಡುತ್ತಿದ್ದಾನೆ ಎಂದು ಗೀತೆಗಳ ಮೂಲಕ ಹರ್ಷ ವ್ಯಕ್ತಪಡಿಸುತ್ತಿದ್ದಾಳೆ.

### ಸೊಸೆಯಾಗಿ ಮಹಿಳೆ

ಮಾನವ ಹಲವಾರು ಸಂಬಂಧಗಳ ಸುಳಿಯಲ್ಲಿದ್ದಾನೆ. ಆತ ಅವುಗಳನ್ನು ಜಾಗರೂಕತೆಯಿಂದ ನಿರ್ವಹಿಸುತ್ತಿದ್ದಾನೆ. ಇದಕ್ಕೆ ಜನಪದ ಮಹಿಳೆಯೂ ಹೊರತಾಗಿಲ್ಲ. ತಾನು ಮಗಳಾಗಿದ್ದಳು ಈಗ ಬೇರೊಬ್ಬರ ಮನೆಯ ಸೊಸೆಯಾಗಿದ್ದಾಳೆ. ಆಗ ಬಿಚ್ಚಿಟ್ಟ ಸುಖ-ದುಃಖಗಳೇ ಗೀತೆಗಳ ರೂಪದಲ್ಲಿವೆ.

**ಆಕಳದಂಥಾ ಅತ್ತಿ, ಗೋಕುಲದಂಥಾ ಮಾವ ।**
**ಶ್ರೀಕೃಷ್ಣನಂಥ ಪತಿರಾಯ । ನಿದ್ದರ**
**ಸಾಕಿದ ತವರು ಮರೆತೇನ ॥**

ಸೊಸೆಯನ್ನು ಹೆತ್ತ ಮಗಳಂತೆ ಕಾಣುವ ಅತ್ತೆ-ಮಾವನಿದ್ದರೆ ಹೆಣ್ಣುಮಗಳಿಗೆ ಅದಕ್ಕಿಂತ ಸ್ವರ್ಗ ಇನ್ನೊಂದಿಲ್ಲ. ಜೊತೆಗೆ ಪ್ರೀತಿ ತೋರುವ ಪತಿರಾಯನು ಬಳಿಯಿದ್ದರೆ ಸಾಕಿದ ತವರನ್ನು ಅಂದರೆ ತಂದೆ ತಾಯಿಯನ್ನು ಮರೆಯುತ್ತೇನೆ ಎಂದು ಜನಪದ ಮಹಿಳೆ ಇಲ್ಲಿ ನುಡಿದಿದ್ದಾಳೆ. ಅವಳಿಗೆ ಸದ್ಗುಣಗಳನ್ನು ಹೊಂದಿದ ಅತ್ತೆ, ಮಾವ ಮತ್ತು ಪತಿ ದೊರಕಿದ್ದಾರೆ. ಅದಕ್ಕವಳ ಸಂತೋಷಕ್ಕೆ ಪಾರವೇ ಇಲ್ಲ. ಆದರೆ ಎಲ್ಲ ಹೆಣ್ಣುಮಕ್ಕಳಿಗೂ ಇಂತಹ ಭಾಗ್ಯ ಸಿಗುವುದಿಲ್ಲ.

**ಅತ್ತಿಯ ಮನಿಯಾಗ ಅರವತ್ತು ಗಂಗಾಳ ।**
**ಬೆಳಗತೇನೆನತ್ತಿ ಬೈಬ್ಯಾಡ । ತವರವರು**
**ಸರಮುತ್ತ ಮಾಡಿ ಸಲುವ್ಯಾರ ॥**

ಅತ್ತೆಯ ಮನೆಯಲ್ಲಿ ತನ್ನ ಕಾಣುವ ರೀತಿ ಅರಿತ ಜನಪದ ಮಹಿಳೆ ಅತ್ತೆಗೆ ವಿನಂತಿಸಿಕೊಳ್ಳುವಳು. ನನ್ನನ್ನು ತವರಲ್ಲಿ ತಂದೆ-ತಾಯಿಯು ಮುತ್ತಂತೆ ಸಾಕಿದ್ದಾರೆ. ಅದಕ್ಕೆ ಗಂಡನ ಮನೆಯ ಕೆಲಸಗಳನ್ನು ಕಲಿಯಲಿಕ್ಕೆ ತಡವಾಗುತ್ತದೆ. ಆದರೆ ಅತ್ತೆ ಅದಕ್ಕೆಂದೇ ನನ್ನನ್ನು ಬಯ್ಯಬೇಡ ಎಂದು ನಿವೇದನೆ ಮಾಡಿಕೊಳ್ಳುವ ವೇದನೆ ವ್ಯಕ್ತವಾಗಿದೆ.

**ಗೆಳತಿಯಾಗಿ ಮಹಿಳೆ**

ಎಲ್ಲ ರಕ್ತ ಸಂಬಂಧಗಳ ಮೀರಿದ್ದು ಸ್ನೇಹಸಂಬಂಧ. ಸ್ನೇಹವೆಂಬುದು ಮೊಗ್ಗಾಗಿ ಅರಳಿ, ಕಾಯಾಗಿ, ಹಣ್ಣಾಗೋವರೆಗೂ ಬಿಡದ ಬಂಧ. ಬಾಲ್ಯದಿಂದ ಮುಪ್ಪಿನವರೆಗೂ ಅಳುವ ಕಣ್ಣೊರೆಸುವ, ನೊಂದ ಹೃದಯವನ್ನು ಸಂತೈಸುವ ಕಾರ್ಯವನ್ನು ಸ್ನೇಹ ಮಾಡುವುದು. ಜನಪದ ಮಹಿಳೆಗೆ ಗೆಳತಿಯರೆಂದರೆ ಪಂಚಪ್ರಾಣ. ಹೆಣ್ಣುಮನಸ್ಸನ್ನು ಮತ್ತೊಂದು ಹೆಣ್ಣುಮಗಳೇ ಅರಿವಳೆಂಬುದನ್ನು ತಿಳಿದವಳು.

**ನಾನು ನನ ಗೆಳದಿ ಕೂಡಿ ನೀರಿಗಿ ಹೋಗಿ ।**
**ಕುಲವ ಕೇಳ್ಯಾರ ಬಹುಮಂದಿ । ಕೇಳಿದರ**
**ಕುಲವೆರಡು ನಮ್ಮ ಮನವೊಂದು ॥**

ಜಾತಿಯನ್ನು ಮೀರಿದ್ದು ಸ್ನೇಹ. ಅದನ್ನು ಪ್ರಶ್ನಿಸಿದ ಕೆಲವರಿಗೆ ಜನಪದ ಮಹಿಳೆಯೂ ಕುಲ ಬೇರೆಯಾಗಿರಬಹುದು. ಆದರೆ ನಮ್ಮ ಮನಸ್ಸು ಒಂದೇ. ನಾವು ಒಂದೇ ಎನ್ನುವ ಭಾವ ಒಡಮೂಡಿಸಿದ್ದಾಳೆ. ನೀರಿಗೆ, ಗುಡಿಗೆ, ಜಾತ್ರೆಗೆ ಹೋಗುವಾಗಲೂ ಗೆಳತಿಯರೊಡನೆ ಹೋಗುವಳು. ಅವಳೊಡನೆಯೇ ಸುಖ-ದುಃಖ ಹಂಚಿಕೊಳ್ಳುವ ಸ್ವಭಾವ ಅವಳದು.

**ದೊಡ್ಡವರ ಮಗಳವ್ವ ಎದ್ದೇನ ಗೆಳೆದವ್ವ ।**
**ತಿದ್ದೂತ ಬಳಿಯ ತಿರುವುತ । ನಿಮ್ಮತ್ತಿ**
**ಮದ್ದಾನೆ ಎಂದು ಕರೆದಾಳ ॥**

ಗೆಳತಿಗೆ ಬುದ್ದಿಯ ಹೇಳುವ ಸಲುಗೆ, ಸಂತೈಸುವ ಮನೋಭಾವಿರುತ್ತದೆ. ಅದಕ್ಕೆ ಮೇಲಿನ ಗೀತೆಯೇ ಸಾಕ್ಷಿ. ಜನಪದ ಮಹಿಳೆಯ ಗೆಳತಿ ಶ್ರೀಮಂತರ ಮಗಳು. ಬೇಗನೇ ಎದ್ದು ಅವಳು ಮಾಡುವುದು ಏನು ಇಲ್ಲ. ಏಕೆಂದರೆ ಅವರ ಮನೆಯಲ್ಲಿ ಆಳುಗಳೇ ಎಲ್ಲ ಕೆಲಸ ಮಾಡುವರು. ಸುಖದಿಂದ ಬೆಳೆದ ಗೆಳತಿಗೆ ಬೇಗನೆ ಏಳಬೇಕು, ಎದ್ದು ಕೆಲಸ ಮಾಡುವ ಗುಣಗಳ ಬೆಳೆಸಿಕೊಳ್ಳಬೇಕು ಇಲ್ಲದಿದ್ದರೆ, ಅತ್ತೆಯ ಮನೆಯಲ್ಲಿ ಬಾಳುವುದು ಕಷ್ಟ. ಮುಂದೆ ಅತ್ತೆಯಾಗುವವಳು ನಿನ್ನನ್ನು ಮದ್ದಾನೆ ಎಂದು ಕರೆವಳು ಅದಕ್ಕಾಗಿ ಈಗಲೇ ಸದ್ಗುಣಗಳ ಬೆಳೆಸಿಕೊ ಎಂದು ನುಡಿವಳು.

**ಜಾನಪದಕ್ಕೆ ಮಹಿಳೆಯರ ಕೊಡುಗೆ**

ಹೆಣ್ಣಿಂದ ಸಂಸಾರ; ಹೆಣ್ಣಿಂದ ಸಂತಾನ; ಹೆಣ್ಣಿಂದ ಬಾಳಿನ ಸಮೃದ್ಧಿ. ಹೆಣ್ಣು ಪವಿತ್ರವಾಗಿದ್ದಲ್ಲಿ ಸಮಾಜವನ್ನು ವ್ಯವಸ್ಥೆಯಲ್ಲಿಡಲು ಸಾಧ್ಯ. ಪತಿಯೇ ಪರದೈವ ಎಂದು ನಂಬಿದ ಇವಳನ್ನು **'ಗರತಿ'** ಎನ್ನಲಾಗಿದೆ. **'ನೂರು ತರ, ನೂರು ಸ್ವರ, ಅತಿಮಧುರ'** ಎನ್ನುವಂತೆ ಗೀತ ಸಾಹಿತ್ಯ ಒಡಮೂಡಿದ್ದು ಸ್ತ್ರೀ ಸಮುದಾಯದಿಂದ. ಆಕೆ ಮನಸ್ಸು ಮಾಡಿದರೆ, ಬಾಳೊಂದು ಮಧುರ ಹಾಡಾಗಬಲ್ಲುದು. ಆಕೆಯ ಹಾಡುವ ಕಲೆ ದೈವದತ್ತ ವರ. ತಾಯಿ ಸರಸ್ವತಿಯೇ ಅವಳು. ಬದುಕಿನ ಕ್ಷಣಗಳನ್ನು ಪದಗಳಲ್ಲಿ ಹೂಮಾಲೆಯಂತೆ ಕಟ್ಟುವ ಸೃಜನಶೀಲತೆ ಅವಳದು. ತಾನು ಗೇಯ್ಮೆಯನ್ನು ಮಾಡುವಾಗ ಕುಟ್ಟುವ, ಬೀಸುವ, ಲಾಲಿ, ನಾಟಿಯ, ಸೋಬಾನೆ, ಮಂಗಳ ಮುಂತಾದ ಗೀತೆಗಳನ್ನು ಉಕ್ತಿಸಿದ್ದಾಳೆ. ಅಜ್ಜಿಯಾಗಿ ನೀತಿಕಥೆಗಳನ್ನು ಹೇಳಿದ್ದಾಳೆ. ಲಾವಣೀ, ಮಹಾಕಾವ್ಯ, ಒಗಟು, ಒಡಪಿನ ವನಪನ್ನು ಹರಿಸಿದ್ದಾಳೆ. ಅವಳು ವಿಶ್ವಜಾನಪದಕ್ಕೆ ನೀಡಿರುವ ಕೊಡುಗೆ ಅಪಾರ ಹಾಗೂ ಸ್ಮರಣೀಯ.

ಹುಟ್ಟಿದ ಹಳ್ಳಿಹಳ್ಳಿಗೂ ಅದರದೇ ಇತಿಹಾಸ. ಜಾನಪದ ಸಾಹಿತ್ಯವಿದೆ. ಅದರಲ್ಲಿ ಗೀತೆಗಳದ್ದೇ ಅಗ್ರಪಾಲು. ಸಾಗರದಂತಿರುವ ಜಾನಪದ ಗೀತೆಗಳಲ್ಲಿ ಸಾಸಿವೆ ಕಾಳಿನಷ್ಟು ಮಾತ್ರ ತರಲಾಗಿದೆ. ಗೀತೆಗಳು ಬಹು ವ್ಯಾಪಕವಾಗಿವೆ. ಹೆಣ್ಣು-ಗಂಡು, ಭೂಮಿ, ಪ್ರಕೃತಿ, ಸಮಾಜ ವಿವಿಧ ಸಂಬಂಧಗಳನ್ನು ಕೇಂದ್ರವಾಗಿರಿಸಿಕೊಂಡು ರಚನೆಯಾದವು. ಓದುಬರಹದ ಅರಿವಿಲ್ಲದ ಜನಪದರು ಪ್ರೇಮದ ಹಂಬಲಿಗರು. ಜನಪದ ಮಹಿಳೆಯ ಮೌಖಿಕ ಪರಂಪರೆಯಲ್ಲಿ ಮುಖ್ಯಪಾತ್ರ ನಿರ್ವಹಿಸಿರುವಳು. ಅವಳು ಕಂಡ ಪತಿಯ ಪ್ರೇಮ, ತಂದೆ-ತಾಯಿಯ ವಾತ್ಸಲ್ಯ, ಅಣ್ಣನ ಕಳಕಳಿ, ತಮ್ಮನ ಸದ್‌ವಿನಯ, ಗೆಳತಿಯ ಸ್ನೇಹ ಇಂದಿಗೂ ಚಿರಾಯು. ಹೊಳೆದಂಡೆಯ ಮೇಲಿನ ಕರಕೀಯ ಬಳ್ಳಿಯ ಹಾಗೆ ಜನಪದರ ನುಡಿಗಡಣಗಳು ಶಾಶ್ವತ ಮತ್ತು ಬಾಯಿಂದ ಬಾಯಿಗೆ ಹರಿದು ಬಂದ ಇವು ರಸಬಳ್ಳಿಯ ರೀತಿ ಹಬ್ಬುತ್ತಲೇ ಇವೆ. ಏಕೆಂದರೆ ಜಾನಪದ ಪರಂಪರೆ ಅಜರಾಮರ.

**ಆಕರ ಸಾಹಿತ್ಯ**


- **ಹಳ್ಳಿಯ ಹಾಡುಗಳು** -ಗೊರೂರು ರಾಮಸ್ವಾಮಿ ಅಯ್ಯಂಗಾರ್
- **ಹಳ್ಳಿಯ ಬಾಳು** -ಗೊರೂರು ರಾಮಸ್ವಾಮಿ ಅಯ್ಯಂಗಾರ್
- **ಗರತಿಯ ಹಾಡು** -ಹಲಸಂಗಿ ಗೆಳೆಯರು
- **ಕನ್ನಡ ಜಾನಪದ ಗೀತೆಗಳು**-ಡಾ. ಬಿ.ಎಸ್. ಗದ್ದಗಿಮಠ
- **ಜಾನಪದ ಗೀತಾಂಜಲಿ** -ದೇ.ಜವರೇಗೌಡ
- **ಜೀವಂತ ಜಾನಪದ** -ಪ್ರೊ. ದೊಡ್ಡರಂಗೇಗೌಡ
- **ದುಂಡಮಲ್ಲಿಗಿ ಹೂವ ಬುಟ್ಟಿಲಿ ಬಂದಾವ** -ಎಚ್.ಎಲ್. ನಾಗೇಗೌಡ
- **ಕನ್ನಡ ಜಾನಪದ ಕೋಶ** -ಸಂ. ಎಚ್.ಎಲ್. ನಾಗೇಗೌಡ, -ಟಿ.ಆರ್. ಮಹಾದೇವಯ್ಯ
- **ದೇಸಿ** -ಡಾ. ವೀರಣ್ಣ ದಂಡೆ
- **ಕನ್ನಡ ಸಂಕ್ಷಿಪ್ತ ನಿಘಂಟು** -ಕನ್ನಡ ಸಾಹಿತ್ಯ ಪರಿಷತ್ತು


❑



*"There was a grief I smoked
in silence, like a cigarette
only a few poems fell
out of the ash I flicked from it."*

■ *Amrutha Pritam*

# ಅಮೃತಾ ಪ್ರೀತಂ ಬದುಕು ಮತ್ತು ಬರಹ

■ ಪ್ರವೀಣ್ ಕುಮಾರ್

ನನ್ನೊಡನೆ ಪಿಹೆಚ್.ಡಿ ಮಾಡುತ್ತಿರುವ ನನ್ನ ಗೆಳೆಯನ ಸಂಶೋಧನಾ ವಿಷಯವಾದ ಮಹಿಳಾ ಆತ್ಮಕಥೆಗಳನ್ನು ಕುರಿತು ಚರ್ಚೆ ಮಾಡುತ್ತಿದ್ದಾಗ ಚರ್ಚೆಯ ಬಹುಪಾಲನ್ನು ಪಡೆದದ್ದು ಬರಹಗಾರ್ತಿ ಅಮೃತಾ ಪ್ರೀತಂ. ಹಾಗಾಗಿ ಇವರ ಬಗೆಗೆ ಬರೆಯ ಬೇಕೆಂದು ನಿರ್ಧರಿಸಿ ಅಂದೇ ಅವರ ಆತ್ಮಕಥೆಯನ್ನು ಓದಿ ಮುಗಿಸುವ ವೇಳೆಗೆ ಬೆಳಿಗ್ಗೆ ನಾಲ್ಕು ಗಂಟೆ. ವಿವಿಧ ಮೂಲಗಳಿಂದ ವಿಷಯ ಸಂಗ್ರಹಿಸುವಾಗ ತಿಳಿದದ್ದು ಇಂದು ಅವರ ಹುಟ್ಟು ಹಬ್ಬವೆಂದು. ಹಾಗಾಗಿ ಹುಟ್ಟು ಹಬ್ಬದ ಕೊಡುಗೆಯಾಗಿ ಈ ಲೇಖನವನ್ನು ಅರ್ಪಿಸುವ ಎಂದು ಮನದಲ್ಲೆ ನಿರ್ಧರಿಸಿ ಬರೆಯಲು ಶುರು ಮಾಡಿದೆ. ಮತ್ತು ಅದೇ ದಿನ 31ನೇ ಆಗಸ್ಟ್ 2012ರಂದೇ ಬರೆದು ಮುಗಿಸಿದೆ. ಈ ಕಾರ್ಯಕ್ಕೆ ಸಾಥ್ ನೀಡಿದ ನನ್ನ ಗೆಳೆಯನಿಗೆ ಧನ್ಯವಾದಗಳು. ಈ ಲೇಖನವನ್ನು ಅಮೃತಾ ಪ್ರೀತಂರಿಗೆ ಸಮರ್ಪಿಸುತ್ತಿದ್ದೇನೆ. ಅಕ್ಟೋಬರ್ 31ರಂದು ಅಮೃತಾ ಪ್ರೀತಂರವರು ನಿಧನರಾದ ದಿನ ಹಾಗಾಗಿ ಈ ಅವಧಿಯಲ್ಲಿ ಅವರ ಕುರಿತಾದ ಲೇಖನ ಪ್ರಕಟಗೊಂಡರೆ ತುಂಬ ಸಂತಸ. ಈ ಲೇಖನದಲ್ಲಿ ಮುಖ್ಯವಾಗಿ 'ಅಮೃತಾ ಪ್ರೀತಂ ರವರ ವೈಯಕ್ತಿಕ ಜೀವನ', 'ಸಾಹಿತ್ಯ ಕೃಷಿ ಮತ್ತು ಪುರಸ್ಕಾರ' ಹಾಗೂ 'ಅಮೃತಾ ಪ್ರೀತಂರ ಜೀವನ ವೈಶಿಷ್ಟ್ಯತೆ' ಎಂಬ ಮೂರು ಭಾಗಗಳಲ್ಲಿ ಅಮೃತಾ ಪ್ರೀತಂರ ಜೀವನವನ್ನು ಹಿಡಿದಿಡುವ ಪ್ರಯತ್ನ ಮಾಡಲಾಗಿದೆ.

### ಅಮೃತಾ ಪ್ರೀತಂರ ವೈಯಕ್ತಿಕ ಜೀವನ

ಬುದ್ಧಿಶಾಲಿಗಳು, ವೀರರೂ ಹುಟ್ಟಿದ ಗುಜರನ್ ವಾಲಾ (ಈಗ ಪಾಕಿಸ್ತಾನದಲ್ಲಿದೆ)ದಲ್ಲಿ 1919ರ ಆಗಸ್ಟ್ 31ರಂದು ಕುಲೀನ ಸಿಕ್ ಸಾಹಿತಿ ಕುಟುಂಬ ವೊಂದರಲ್ಲಿ ಜನಿಸಿದರು. ತಂದೆ ಶಾಲಾ ಶಿಕ್ಷಕ, ಕವಿ, ಬ್ರಜ್ ಭಾಷಾ ವಿದ್ವಾಂಸ ಕರ್ತಾರ ಸಿಂಗ್ ಮತ್ತು ತಾಯಿ ರಾಜಬೀಬಿ ಇವರ ಏಕೈಕ ಪುತ್ರಿಯಾಗಿ ಜನಿಸಿದರು. ಹನ್ನೊಂದರ ಹರೆಯದಲ್ಲಿದ್ದಾಗಲೇ ತಾಯಿಯನ್ನು ಕಳೆದುಕೊಂಡರು. ಅಮೃತಾ ಪ್ರೀತಂ ತಮ್ಮ ಆತ್ಮಕಥೆಯಲ್ಲಿ ಹೇಳುವಂತೆ "ನಾನು ಹನ್ನೊಂದರ ಹರೆಯದಲ್ಲಿರುವಾಗಲೇ ತಾಯಿಯನ್ನು ಕಳೆದುಕೊಂಡೆ ಆಗ ನಾನು ಪೂರ್ಣವಾಗಿ

ಏಕಾಂಗಿಯಾಗಿದ್ದೆ. ಈ ಏಕಾಂಗಿತನದ ಬಿಡುಗಡೆಗಾಗಿಯೇ ನಾನು ಬರೆಯಲು ಪ್ರಾರಂಭಿಸಿದೆ, ನನ್ನ ತಂದೆಯವರೂ ಉತ್ತೇಜನ ನೀಡಿದರು" ಎಂದು ಬರೆಯುತ್ತಾರೆ. ಹೀಗೆ ಅವರ ಮೊದಲ ಕವನ ಸಂಕಲನ 'ಅಮೃತ ಲೆಹೆರಾನ್' 16ನೇ ವಯಸ್ಸಿನವರಿದ್ದಾಗ ಅಂದರೆ 1936ರಲ್ಲಿ ಪ್ರಕಟವಾಯಿತು. ತಮ್ಮ ಹದಿನಾರರ ಹರೆಯ ವಿಶಿಷ್ಟವಾದುದು ಎಂದು ಹೇಳುತ್ತಾ "came my sixteenth year like a stranger, Inside me. There was an awareness. I could not explain" ಎಂದು ಹೇಳುತ್ತಾರೆ. ಮುಂದೆ ಪಂಜಾಬಿ ಸಾಹಿತ್ಯದ ಶಿರೋಮಣಿಗಳಲ್ಲಿ ಒಬ್ಬರಾದ ಈಕೆಯ ಆರಂಭದ ಬರಹಗಳೆಲ್ಲ ತುಂಬಾ ಸಂಪ್ರದಾಯಶೀಲವಾಗಿದ್ದವು. 1947ರ ದೇಶ ವಿಭಜನೆಯ ಸಂದರ್ಭ ಇವರ ಬರವಣಿಗೆಯ ಗತಿಯನ್ನೇ ಬದಲಾಯಿಸಿತೆನ್ನಬಹುದು.

ಅಮೃತಾ ಪ್ರೀತಂ ಅವರು ಹದಿಹರೆಯಲ್ಲಿಯೇ ಸಿದ್ಧ ಉಡುಪು ಮಾರಾಟದ ಮುಂಚೂಣಿಯಲ್ಲಿದ್ದ ಲಾಹೋರ್‌ನ ಅನಾರ್ಕಲಿ ಬಜಾರ್‌ನ ವ್ಯಾಪಾರಿಯ ಪುತ್ರ ಪ್ರೀತಂ ಸಿಂಗ್‌ರನ್ನು 1935ರಲ್ಲಿ ವಿವಾಹವಾದರು. ಇವರಿಂದ ನವರಾಜ್ ಮತ್ತು ಕಂಡ್ಲಾ ಎಂಬ ಮಕ್ಕಳನ್ನು ಪಡೆದರು. ಆದರೆ ಅಮೃತಾ ಮತ್ತು ಪ್ರೀತಂ ಸಿಂಗ್‌ರ ಮನಸ್ಸುಗಳು ಕೂಡಿಬರಲಿಲ್ಲ. ಕವಯತ್ರಿಯ ಭಾವ ಬದುಕಿಗೆ ಪ್ರೀತಂ ಸಿಂಗ್ ಯಾವ ರೀತಿಯಲ್ಲೂ ಸಾಟಿಯಾಗಲಿಲ್ಲ. ಅಂದಿನ ದಿನಗಳಲ್ಲಿ ಸಾಹಿರ್ ಲುಧಿಯಾನ್ವಿ ಎಂಬ ಕವಿ ಹೆಚ್ಚು ಹೆಸರನ್ನು ಮಾಡಿದ್ದನು. ಎಡ ಪಂಥೀಯ ಒಲವನ್ನು ಹೊಂದಿದ್ದ ಈತನೆಂದರೆ ಅಮೃತಾ ಪ್ರೀತಂರಿಗೆ ಅಚ್ಚುಮೆಚ್ಚು. ಈತ–ಈತನ ಕವಿತೆಗಳು ಅಮೃತರನ್ನು ಯಾವ ಪರಿ ಸೆಳೆಯಿತೆಂದರೆ ತಮ್ಮ ಪತಿ ಪ್ರೀತಂ ಸಿಂಗರಿಂದ ಬೇರೆಯಾದ ನಂತರ ಸಾಹಿರ್ ಲುಧಿಯಾನ್ವಿಯೊಂದಿಗೆ ಇರಲು ಬಯಸುತ್ತಾರೆ. ಲುಧಿಯಾನ್ವಿ ಓರ್ವ ಗಂಡು, ಕೇವಲ ಗಂಡು! ಅವನಿಗೆ ಅಮೃತ ಪ್ರೀತಂರ ಪ್ರೀತಿ ಅದಕ್ಕಾಗಿ ಆಕೆ ಮಾಡಿದ ತ್ಯಾಗ ಲೆಕ್ಕಕ್ಕೆ ಬರಲೇ ಇಲ್ಲ. ಮತ್ತೋರ್ವ ಹೆಣ್ಣು ಸಾಹಿರ್ ಲುಧಿಯಾನ್ವಿಯವರ ಜೀವನವನ್ನು ಪ್ರವೇಶಿಸುತ್ತಿದ್ದಂತೆ ಸಾಹಿರ್‌ನನ್ನು ತನ್ನಪಾಡಿಗೆ ತಾನಿರುವಂತೆ ಬಿಟ್ಟು ಬರುತ್ತಾರೆ. ಇದೇ ಸಮಯದಲ್ಲಿ "ನಿಷ್ಕಪಟ ಪ್ರೇಮವು ಪೋಷಣೆ, ಗೌರವ, ಹೊಣೆಗಾರಿಕೆ, ತಿಳುವಳಿಕೆ ಈ ಎಲ್ಲ ಅರ್ಥಗಳನ್ನು ಒಳಗೊಂಡಿದೆ" ಎನ್ನುವ ಎರಿಕ್ ಫಾಮ್ ನುಡಿಗೆ ಸಾಕಾರದಂತೆ



ತನಗಿಂತ ಆರೂವರೆ ವರ್ಷ ಕಿರಿಯನಾಗಿದ್ದ 'ಇಮ್ರೋಜ್' ಎಂಬ ಕಲಾವಿದನ ಜೊತೆಯಲ್ಲಿ ಬದುಕು ಆರಂಭಿಸುತ್ತಾರೆ. ಸುಮಾರು 40 ವರ್ಷಗಳ ಕಾಲ ಸುದೀರ್ಘ ಬದುಕನ್ನು ಇಮ್ರೋಜನ ಜೊತೆ ಕಳೆದ ಅಮೃತಾ ಪ್ರೀತಂರ ಜೀವನ ಕಥೆಯನ್ನು ಅಮೃತಾ ಇಮ್ರೋಜ್ : ಎ ಲೌ ಸ್ಟೋರಿಯಲ್ಲಿ ದಾಖಲಿಸಿದ್ದಾರೆ. ದೀರ್ಘ ಅನಾರೋಗ್ಯದ ಕಾರಣ ನಿದ್ರಾವಸ್ಥೆಯಲ್ಲಿಯೇ ತಮ್ಮ 86ನೇ ವಯಸ್ಸಿನಲ್ಲಿ(31–10–2005) ನವದೆಹಲಿಯಲ್ಲಿ ನಿಧನರಾದರು. ಈ ಮೂಲಕ ಇಮ್ರೋಜ್, ಪುತ್ರಿ ಕಂಡ್ಲಾ, ಮಗ ನವರಾಜ್ ಸೊಸೆ ಅಲ್ಕಾ ಮತ್ತು ಮೊಮ್ಮಕ್ಕಳಾದ ಟಾರಸ್, ನೂರ್, ಅಮಾನ್ ಮತ್ತು ಶಿಲ್ಪಿಯನ್ನು ಅಗಲಿದರು.

ಹೀಗೆ 1936ರಿಂದ 1943ರ ಅವಧಿಯಲ್ಲಿ ಸುಮಾರು ಅರ್ಧ ಡಜನ್‌ಗಳಷ್ಟು ಕವನ ಸಂಕಲನಗಳು ಬೆಳಕಿಗೆ ಬಂದವು. ತಮ್ಮ ಕವಿತೆಗಳನ್ನು ರೋಮಾಂಚನಕಾರಿ ಪ್ರೇಮದ ವಸ್ತುಗಳಿಗೆ ಮೀಸಲಿಟ್ಟರು. ಆದರೆ 1947ರ ದೇಶ ವಿಭಜನೆ ಅಮೃತಾ ಪ್ರೀತಂರ ಬರವಣಿಗೆಯ ಗತಿಯನ್ನೇ ಬದಲಾಯಿಸಿತೆನ್ನಬಹುದು. ನಂತರ 1936ರಲ್ಲಿ ಪ್ರಾರಂಭಗೊಂಡ 'ಪ್ರಗತಿಪರ ಲೇಖಕರ ಚಳುವಳಿ'ಯ ಭಾಗವಾದರು. ಭಾರತದ ವಿಭಾಗದ ಮುಂಚೆ ಲಾಹೋರ್ ಆಕಾಶವಾಣಿ ಕೇಂದ್ರದಲ್ಲಿ ಕೆಲಸ ಮಾಡಿದ್ದರು. 1948ರಲ್ಲಿ ಡೆಹರಾಡೂನಿಂದ ದೆಹಲಿಗೆ ಬಂದ ನಂತರ ಪಂಜಾಬ್ ಸೇವೆಯಲ್ಲಿನ ದೆಹಲಿಯ ಆಲ್ ಇಂಡಿಯಾ ರೇಡಿಯೋದಲ್ಲಿ 1961ರವರೆಗೆ ಕಾರ್ಯ ನಿರ್ವಹಿಸಿದರು.

### ಸಾಹಿತ್ಯ ಕೃಷ್ಟಿ ಮತ್ತು ಪುರಸ್ಕಾರಗಳು

"ನಾನು ಹೇಳ ಬಯಸಿದ್ದೆಲ್ಲವನ್ನು ನನ್ನ ಬರಹಗಳು ಹೇಳುತ್ತವೆ" ಎಂದು ಜ್ಞಾನಪೀಠ ಪ್ರಶಸ್ತಿಗೆ ಪ್ರತಿಕ್ರಿಯಿಸಿದ ಅಮೃತಾ ಪ್ರೀತಂ ತುಂಬಾ ಆತ್ಮೀಯರಾಗಿರುತ್ತಿದ್ದ ಲೇಖಕಿ. ಈಕೆಯಂತೆ ತನ್ನ ವಿಚಾರಗಳನ್ನು ನಿರ್ಭಿಡೆಯಾಗಿ, ಮಾದಕವಾಗಿ ಅಭಿವ್ಯಕ್ತಿಗೊಳಿಸುವ, ಬದುಕುವ ಮಹಿಳಾ ಲೇಖಕಿಯರಲ್ಲಿ ಕಮಲಾದಾಸ್ ಒಬ್ಬರನ್ನು ಬಿಟ್ಟರೆ ಈ ದೇಶದಲ್ಲಿ ಬಹು ಕಡಿಮೆ. ಸಾಹಿತ್ಯ ಕಲೆಗಳಲ್ಲಿ ಸ್ತ್ರೀ–ಪುರುಷ ಸಂಬಂಧಗಳಿಗೆ ವಜ್ರ ಕಠೋರ ನಿಯಮಗಳಿರಬೇಕಾಗಿಲ್ಲ. ಮನುಷ್ಯ ಸಂಬಂಧಗಳ ಗಾಢತೆಗೆ ಆಯಾಮವಾಗಿರುವ ಇವು ಸ್ವಾಭಾವಿಕತನ ದಿಂದಲೇ ಇರುವಂತಹುದು ಎಂದು ನಂಬಿದ್ದ ಅಮೃತಾ ಪ್ರೀತಂರ ಜೀವನದಷ್ಟೇ ಕೃತಿಗಳು ಸಹ ವೈವಿಧ್ಯಪೂರ್ಣವಾದವುಗಳು. ಹೀಗೆ 18ಕವನಸಂಕಲನ, 28 ಕಾದಂಬರಿಗಳು, 5 ಕಥಾ ಸಂಕಲನ ಸೇರಿ ಒಟ್ಟು 75 ಕೃತಿಗಳನ್ನು ರಚಿಸಿದ್ದು ಇವುಗಳಲ್ಲಿ ಕೆಲವು ಇಂಗ್ಲೀಷ್, ರಷ್ಯಾ, ಅಲ್ಬೇನಿಯನ್, ಸೆಲಾಬಿಯನ್, ಫ್ರೆಂಚ್, ಡ್ಯಾನಿಶ್, ಉರ್ದು ಮೊದಲಾದ ಸುಮಾರು 30ಭಾಷೆಗಳಿಗೆ ಅನುವಾದಗೊಂಡಿವೆ. ಕವಿತೆ, ಕಾದಂಬರಿ, ಆತ್ಮಕಥನ, ಸಾಹಿತ್ಯ ವಿಮರ್ಶೆ, ಪ್ರವಾಸಾನುಭವ ಈ ಎಲ್ಲಾ ಪ್ರಕಾರಗಳಲ್ಲೂ ಕೈಯಾಡಿಸಿದ್ದಾರೆ. ಅಮೃತಾ ಪ್ರೀತಂರ ಕೃತಿ ರತ್ನಗಳೆಂದರೆ:

**ಕಾದಂಬರಿಗಳು:** ಜೈಶ್ರೀ (1946), ಡಾಕ್ಟರ್ ದೇವ್(1949), ಪಿಂಜಾರ (1950), ಆಲಾನಾ (1952), ಆಶು (1958), ಇಕ್ ಸವಾಲ್ (1959), ಬುಲಾವಾ (1960), ಬಂದ್ ದರ್ವಾಜಾ (1962), ಇಕ್ ಸಿ ಅನಿತಾ (1964), ಚಕ್ ನಂ ಚರ್ತಿ (1964), ಎಸ್ಕಿಮೋ ಸ್ಟೈಲ್ (1967), ದಿಲ್ ಕಿ ಗಲಿಯಾಂ (1968), ಏರಿಯಲ್ (1968), ಜಲಾವಾತನ್ (1968),ಕೋರೆ ಕಾಗಜ್, ಉಂಚಾಸ್ ದಿನ್ (1979), ಸಾಗರ್ ಐರ್ ಸೀಪಿಯಾನ್, ರಂಗ್ ಕಾ ಪತ್ತಾ, ತೆರವ್ಹಾನ್ ಸೂರಜ್, ಯಾತ್ರೀ, ಯೆಹ್ ಸಚ್ಚಾ ಹೆ, ಆಖರಿ ಕಥ್, ಹರ್ ದತ್ ಕಾ ಜಿನ್‌ಂದಗಿನಮ್.

**ಕವನ ಸಂಕಲನ :** ತಂಡಿಯನ್ ಕಿರಣ್ (1935), ಅಮ್ರುತ್ ಲೆಹರೆ (1936), ಜಿಯುಂಡ ಜೀವನ್ (1939), ಟ್ರೆಲ್ ಧೋತೆ ಫೂಲ್ (1943), ಗೀತನ್ ವ್ಯಾಲಿಯಾ (1942), ಬದ್ಲಾಮ್ ದೆ ಲಾಲಿ (1943), ಲೋಕ್ ಪೀರಾ (1944), ಪಥರ್ ಗೀತೆಯ್ (1946), ಲಾಮಿಯಾಂ ವತನ್ (1949), ಪಂಜಾಬಿ ದಿ ಆವಾಜ್ (1952), ಸುನೆಹೆರೆಯ್ (1955), ಅಶೋಕ್ ಚೆಟಿ (1957), ಕಸ್ತೂರಿ (1957), ನಾಗಮಣಿ (1964), ಕಾಗಜ್ ಕೆ ಕ್ಯಾನ್ವಾಸ್ (1981), ಚುನಿ ಹುವೀ ಕವಿತಾಯೇ.

**ಸಣ್ಣಕಥೆ :** ಚಬ್ಬೀ ವಹರ್ ಬಾದ್ (1943), ಚೆನಾನ್ ದಾ ಹೌಕಾ (1962), ಕಹಾನಿಯಾ ಜೋ ಕಹಾನಿಯಾ ನಹಿ, ಕಹನಿಯೋಂಕೆ ಆಂಗನ್ ಮೆ, ಸ್ಟೆಂಚ್ ಆಫ್ ಕೆರೋಸಿನ್, ಕುಂಜಿಯನ್.

**ಗದ್ಯ :** ಏಕ್ ಓಹಾರ್ ಸತ್ನಮ್ (ಓಶೊ ಪುಸ್ತಕ ಕುರಿತು), ಕಾಲ್ ಚೆತ್ನಾ (ಸಮಯ ಪ್ರಜ್ಞೆ), ಅಗ್ಯತ್ ಕಾ ನಿಮಂತ್ರಣ್ (ಅನಾಮಧೇಯನ ಕರೆ)

**ಪ್ರವಾಸ ಕಥನ :** ಬುರಿಯಾ ಜರೋಂಕಿ (1961), ಇಕ್ಕ ಪತ್ತಿಯಾಂ ದಾ ಗುಲಾಬ್ (1968)

**ಆತ್ಮಕಥೆ:** ಕಾಲಾ ಗುಲಾಬ್/ಬ್ಲಾಕ್ ರೋಸ್ (1968), ರಸೀದಿ ಟಿಕೆಟ್/ರೆವೆನ್ಯೂ ಸ್ಟಾಂಪ್ (1976), ಅಕ್ಷರೋಂ ಕಾಯ್ ಸಾಯೆ/ಶಾಡೋಸ್ ಆಫ್ ವರ್ಡ್ಸ್ (2004).

**ಸಾಹಿತ್ಯ ಪತ್ರಿಕೆ:** 'ನಾಗಮಣಿ' ಎಂಬ ಪಂಜಾಬಿ ಭಾಷೆಯ ಸಾಹಿತ್ಯಿಕ ಮಾಸ ಪತ್ರಿಕೆಯಲ್ಲಿ 33 ವರ್ಷಗಳ ಕಾಲ ಸಂಪಾದಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

**ಪುರಸ್ಕಾರಗಳು:** ಇಷ್ಟೆಲ್ಲಾ ಸಾಹಿತ್ಯ ಸಾಧನೆಗೈದ ಅಮೃತಾ ಪ್ರೀತಂರವರಿಗೆ ಪದ್ಮಶ್ರೀ, ಪದ್ಮ ವಿಭೂಷಣ, ಸಾಹಿತ್ಯ ಅಕಾಡೆಮಿ ಮತ್ತು 1981ರ ಜ್ಞಾನಪೀಠ ಪ್ರಶಸ್ತಿಯೊಂದಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಸದಸ್ಯತ್ವದ ಗೌರವಕ್ಕೂ ಭಾಜರಾಗಿದ್ದಾರೆ. 1973ರಲ್ಲಿ ದಿಲ್ಲಿ ಮತ್ತು ಜಬಲ್‌ಪುರ್ ವಿಶ್ವವಿದ್ಯಾಲಯಗಳು ಗೌರವ ಡಾಕ್ಟರೇಟ್ ಮತ್ತು ಡಿ.ಲಿಟ್ ಪದವಿಗಳ ಗೌರವನ್ನು ನೀಡಿವೆ. 1986–92ರ ವರೆಗಿನ ಅವಧಿಗೆ ರಾಜ್ಯಸಭೆಯ ಸದಸ್ಯರನ್ನಾಗಿ ನಾಮಕರಣ ಮಾಡಲಾಗಿತ್ತು. ದಿಲ್ಲಿ ಸರ್ಕಾರ ಇವರ ಸಾಹಿತ್ಯ ಸೇವೆಯನ್ನು ಪರಿಗಣಿಸಿ ಜೀವನದ ಕೊನೆಯ ಕಾಲಘಟ್ಟದಲ್ಲಿ ಸಹಸ್ರಮಾನದ ಕವಯತ್ರಿ ಪ್ರಶಸ್ತಿಯನ್ನು ನೀಡಿ ಗೌರವಿಸಿತ್ತು. ಅವರ ಕಡೆಯ ದಿನಗಳಲ್ಲಿ ಅವರಿಗೆ ಪಾಕಿಸ್ತಾನದ ಪಂಜಾಬಿ ಅಕಾಡೆಮಿ ಇವರನ್ನು ಗುರುತಿಸಿ ಪ್ರಶಸ್ತಿಯ ಗೌರವ ಸಲ್ಲಿಸಿತ್ತು. ಅದಕ್ಕೆ ಅವರು ಪ್ರತಿಕ್ರಿಯಿಸುದ್ದು ಹೀಗೆ "ಬಡೆ ದಿನೋ ಬಾದ್ ಮೇರೆ ಮೈಕೆ ಕೋ ಮೇರಿ ಯಾದ್ ಆಯೀ....!"

ಜೊತೆಗೆ 1979ರಲ್ಲಿ ಬಲ್ಗೇರಿಯಾದ International Vaptsarov Award, ಮತ್ತು ಫ್ರೆಂಚ್ ಸರ್ಕಾರದ Degree of Officer dens, Ordre des Arts et des Lettres (Officier) ಪುರಸ್ಕಾರಕ್ಕೂ ಭಾಜನರಾಗಿದ್ದಾರೆ.

ಅಮೃತಾ ಪ್ರೀತಂ ಅವರ 'ಧರ್ತಿ, ಸಾಗರ್ ತೆ ಸಿಪ್ಪಿಯನ್' ಕೃತಿಯನ್ನು 1965ರಲ್ಲಿ "ಕದಂಬರ್" ಎಂಬ ಹೆಸರಿನಲ್ಲಿ ಚಲನಚಿತ್ರವನ್ನಾಗಿಲಾಯಿತು. ಆನಂತರ 'ಉನಾಹ್ ದೀಂ ಕಹನಿ' ಇದನ್ನು "ಡಾಕು" ಎಂಬ ಚಲನಚಿತ್ರವಾಗಿ 1976ರಲ್ಲಿ ಬಸು ಭಟ್ಟಾಚಾರ್ಯ ಅವರು ನಿರ್ದೇಶಿಸಿದರು. ಕಾದಂಬರಿ 'ಪಿಂಜಾರ' ಕಥೆಯನ್ನು ಪ್ರಶಸ್ತಿ ಗಿಟ್ಟಿಸಿದ ಹಿಂದಿ ಚಲನಚಿತ್ರವಾಗಿಸಿದವರು ಚಂದ್ರಪ್ರಕಾಶ್ ದ್ವಿವೇದಿ. ಎರಡೂ ದೇಶಗಳ ಜನತೆಯ ಕಣ್ಣೀರಿನ ಕಥೆಯನ್ನು ಅದ್ಭುತವಾಗಿ ಚಿತ್ರಿಸುವ ಮೂಲಕ ಮಾನವೀಯ ಮೌಲ್ಯಗಲ ಬಿಂಬಕದಿಂದಾಗಿ ಈ ಸಿನೆಮಾ ಜನಪ್ರಿಯವಾಯಿತು.

**ಜೀವನದ ವೈಶಿಷ್ಟ್ಯತೆ**

"ಸತ್ಯಾನ್ವೇಷಣೆಯಲ್ಲಿ ಹೆಣ್ಣು ಗಂಡುಗಳ ಬೇಧವಿಲ್ಲ. ತಮ್ಮ ತಮ್ಮ ಮಾನಸಿಕ ವಿಕಾಸ ಸ್ತರಕ್ಕೆ ಅನುಗುಣವಾಗಿ ಸತ್ಯಕ್ಕೆ ಪರಿಭಾಷೆ ನೀಡುತ್ತಾರೆ. ವಿಕಾಸ ಮನುಷ್ಯನ ದೃಷ್ಟಿಯಲ್ಲೂ ಬದಲಾವಣೆ ತರುತ್ತದೆ. ಅವರ ದೃಷ್ಟಿಕೋನ ಬದಲಾಗುತ್ತದೆ. ಸತ್ಯವನ್ನು ನೋಡುವ ದೃಷ್ಟಿಕೋನ ಬೆಳವಣಿಗೆಯೊಂದಿಗೆ ಬದಲಾಗಲೇಬೇಕು. ಈ ಬದಲಾವಣೆಯನ್ನು ತೆರೆದ ಮನಸ್ಸಿನಿಂದ ಸ್ವೀಕರಿಸಬೇಕು. ತನ್ನ ನೋಟವನ್ನು ಅರಿಯಲು ಯತ್ನಿಸಬೇಕು" (ಯಾತ್ರಿ ಕಾದಂಬರಿಯ ಮುನ್ನುಡಿ) ಈ ಮಾತುಗಳು ಅಮೃತಾ ಪ್ರೀತಂರ ಜೀವನದ ದೃಷ್ಟಿಕೋನವನ್ನು ಸ್ಪಷ್ಟಪಡಿಸುತ್ತದೆ.



ಬದುಕನ್ನು ನಾವು ಬಯಸಿದಂತೆ ನಡೆಸ ಬೇಕೋ ಅಥವಾ ಬಂದಂತೆ ಸ್ವೀಕರಿಸಬೇಕೋ? ಎಂಬ ಮೂಲಭೂತ ಪ್ರಶ್ನೆ ಎದುರಾದಾಗ, ಪಾಲಿಗೆ ಬಂದದ್ದು ಪಂಚಾಮೃತ ಎಂದು ಬಂದ ಬದುಕನ್ನೇ ನಡೆಸುವ ಜನ ನಮ್ಮಲ್ಲಿ ಹೆಚ್ಚು. ಅದುವೇ ಒಳ್ಳೆಯದು ಎಂದು ಬಹಳ ಜನರ ಅಭಿಪ್ರಾಯ. ಸಂಗಾತಿಯು ಹೇಗೆ ಇರಲಿ, ಹೊಂದಿಕೊಂಡು ಹೋಗುವುದರಲ್ಲಿಯೇ ಇದೆ ಭಾರತೀಯ ಸಮಾಜದ ಸಾಂಸ್ಕೃತಿಕ ತಿರುಳು.

ಇತ್ತೀಚಿನ ದಿನಗಳಲ್ಲಿ ಹೆಣ್ಣು ಮಕ್ಕಳು ವಿದ್ಯಾವಂತರಾಗಿ, ಆರ್ಥಿಕ ಸುಭದ್ರತೆ ಪಡೆಯು ತ್ತಿರುವಂತೆಯೇ ತಮ್ಮ ಬದುಕಿನ ಬಗ್ಗೆಯೂ ಸ್ವತಂತ್ರವಾಗಿ ಆಲೋಚಿಸುತ್ತಿದ್ದಾರೆ. ಅಪ್ಪ–ಅಮ್ಮ ತೋರಿಸಿದ ಗಂಡನ್ನು ಮದುವೆಯಾಗಿ, ಜೀವನ ಪೂರ್ತಿ ಅವನೊಡನೆ ಬಾಳುವ ಬದುಕನ್ನು ತಿರಸ್ಕರಿಸುತ್ತಿದ್ದಾರೆ. ತಮಗೆ ನೆಚ್ಚಿದವನೊಡನೆ ಬದುಕನ್ನು ಹಂಚಿಕೊಳ್ಳುವುದು ಜನಪ್ರಿಯ ವಾಗುತ್ತಿದೆ. ಯಾರಿಗೂ ಬಂಧನವಿಲ್ಲ. ಒಬ್ಬರು ಮತ್ತೊಬ್ಬರಿಗೆ ಹೊರೆ ಎಂಬ ಭಾವ ಬರುವ ಮೊದಲೇ ಮನವನ್ನು – ಮನೆಯನ್ನು ಬದಲಿಸಿದರಾಯಿತು, ಇಷ್ಟವಿದ್ದರೆ ಏಕಪಾಲಕ ರಾಗುವುದು ಇಲ್ಲದಿದ್ದರೆ ಮಕ್ಕಳ ಗೊಡವೆಯೇ ಬೇಡ. ಮದುವೆಯ ಯಾವ ಗೊಂದಲವೂ ಇಲ್ಲದೆ ಮೆಚ್ಚಿದವನೊಡನೆ ಬಾಳುವುದು ಇಂದಿನ ದಿನಗಳಲ್ಲಿ ಕಷ್ಟವೇನಿಲ್ಲ. ಆದರೆ ಇಂತಹ ಪ್ರಯತ್ನ ಆರೇಳು ದಶಕಗಳ ಹಿಂದೆ ಕನಸಿನ ಮಾತಾಗಿತ್ತು. ಆದರೆ ಅಮೃತಾ ಪ್ರೀತಂ ತಮ್ಮ ಕನಸನ್ನು ನನಸಾಗಿಸಿ ಕೊಂಡ ದಿಟ್ಟ ಮಹಿಳೆ.

ತನ್ನದೇ ಆದ ಮೌಲ್ಯ ಸಂವೇದನೆಗಳಿಂದ ಬದುಕುತ್ತಾ ಬರೆಯುತ್ತಿದ್ದ ಅಮೃತಾ ಪ್ರೀತಂರ ವ್ಯಕ್ತಿತ್ವ ವಿಶಿಷ್ಟವಾದುದು. ಇವರ ಬರಹಗಳು ಅಶ್ಲೀಲ, ಕಾಮ ಪ್ರಚೋದಕವೆಂಬ ಅಪವಾದಕ್ಕೆ ಒಳಗಾಗಿವೆ. ಈಕೆಯ ಬದುಕು 'ಅಸಹ್ಯ'




ರೀತಿಯದು ಎಂಬ ಹಣೆಪಟ್ಟಿಯನ್ನು ಹೊಂದಿದೆ. ಇವರೇ ಒಂದು ಕಡೆ ತಮ್ಮ ಬದುಕಿನ ದೋರಣೆಗಳು ಕುರಿತು "yes I have led an unconventional life. And I suppose I have been bold. But I have my own conventions, my own self of values and I live by them. Life is a journey from the smaller self to the greater self. And each individual has to find his own personality" ಎಂದು ಹೇಳುತ್ತಾರೆ. ಹೀಗೆ ತಮ್ಮ ಬರಹ, ಬದುಕುಗಳಿಂದ ವಿವಾದಶೀಲರಾಗಿರುವ ಅಂತರ್ ರಾಷ್ಟ್ರೀಯ ಪ್ರಸಿದ್ಧಿ ಪಡೆದಿರುವ ಅಮೃತಾ ಪ್ರೀತಂ ಅವರು ಏನೇ ಬರೆದರೂ ಅದನ್ನು ಆಳವಾದ ತೀವ್ರವಾದ ರೂಪದಲ್ಲಿ ಅಭಿವ್ಯಕ್ತಿ ಗೊಳಿಸುತ್ತಾರಲ್ಲದೆ, ಅನುಭವ ಮತ್ತು ಕಲ್ಪನೆಯ ಪ್ರಾಮಾಣಿಕತೆಗಳು ಇವರ ಎಲ್ಲ ಬರಹಗಳಲ್ಲೂ ಎದ್ದು ಕಾಣುವ ಅಂಶವಾಗಿದೆ.

ಮಾನವೀಯತೆ, ಪ್ರೀತಿ, ಪ್ರೇಮ, ಕಾಮಗಳೇ ಮುಖ್ಯ ವಸ್ತುಗಳಾಗಿರುವ ವಿಶಾಲ ದೃಷ್ಟಿ, ಆಮೂಲಾಗ್ರ ಪರಿಶೀಲನೆಗಳಿಂದೊಡಗೂಡಿದ ತಂತ್ರಶಿಲ್ಪ ಹಾಗೂ ಭಾಷೆ ಮತ್ತು ಸಂಕೇತಗಳ ಬಳಕೆಯಲ್ಲಿ ಅಸಾಧಾರಣತ್ವವನ್ನು ಬೀರುವ ಅಮೃತಾ ಪ್ರೀತಂರ ಬರಹ ಜೀವನವನ್ನು ಅತೀ ಹತ್ತಿರದಿಂದ ಕಂಡು ಅನುಭವಿಸಿ ಬರೆದ ಬರಹಗಳಾಗಿವೆ. ಅದರ ಮರ್ಮವನ್ನು ಅರಿತ, ಕಾಲದ ಓಟದ ಜೊತೆಗೇ ತನ್ನ ಕೊನೆ ಭಾವನೆಗಳನ್ನು ಚಿತ್ರಿಸುವಲ್ಲಿಯೂ ಹೊಸ ನೋಟವನ್ನು ಅಭಿವ್ಯಕ್ತಿಗೊಳಿಸಿದ, ಸಮಕಾಲೀನ ಜೀವನದ ವಿಶಿಷ್ಟತೆ, ಅನುಭವಗಳ ಪ್ರಭಾವಗಳನ್ನು ಅವರ ಬದುಕಿನಲ್ಲೂ ಕಾಣಬಹುದು. ಸ್ತ್ರೀ ಪುರುಷರ ಸಂಬಂಧದ ಕಥೆಗಳನ್ನು ಹೆಣೆಯುವುದರಲ್ಲಿ ಅದರಲ್ಲೂ ಮಾನಸಿಕ ಒತ್ತಡಗಳ ಏರುಪೇರುಗಳನ್ನು ಬಿಂಬಿಸುವಲ್ಲಿ ಅಮೃತಾ ಪ್ರೀತಂ ಎತ್ತಿದ ಕೈ.




"ವಿವಾಹ ಎಂಬುದು ಒಪ್ಪಲೇ ಬೇಕಾದ ಆಚಾರವಲ್ಲ, ಎರಡು ದೇಹ, ಮನಸ್ಸುಗಳ ಬಂಧನ ಮುಖ್ಯ" ಎನ್ನುತ್ತಾರೆ ಅಮೃತಾ ಪ್ರೀತಂ. ಇಬ್ಬರು ವ್ಯಕ್ತಿಗಳು ಬೌದ್ಧಿಕವಾಗಿ ಸಮ್ಮಿಳನವಾಗುವಾಗ ಸಾಮಾಜಿಕ ತಡೆಗಳು, ಸಂಪ್ರದಾಯಗಳು, ಆಚಾರ-ವಿಚಾರಗಳು ಕ್ಷುಲ್ಲಕವಾಗಿ ಮಾಯವಾಗುವವು. ಮಾನವ ನಡತೆ, ಪರಿಸ್ಥಿತಿಯ ಸಂಕೀರ್ಣತೆಯಲ್ಲಿ ಪ್ರೇಮ ಅಡ್ಡಗೆರೆಯನ್ನು ಎಳೆಯುತ್ತದೆ. ಇಂಥ ವಿಶಾಲವಾದ ತೀವ್ರ ಭಾವನೆಗಳ ಅಭಿವ್ಯಕ್ತಿಗಳಿರುವ ಮಹಿಳೆಯನ್ನು ಭಾರತೀಯ ಸಾಹಿತ್ಯ ರಂಗದಲ್ಲಿ ಸಾಮಾನ್ಯವಾಗಿ ಕಾಣುವುದು ದುರ್ಲಭ. ಜೀವನದ ಎಲ್ಲಾ ಹರವುಗಳೂ ಇವರ ಸಾಹಿತ್ಯದಲ್ಲಿ ಮುಪ್ಪುರಿಗೊಂಡಿವೆ.

ಪ್ರಶಂಸೆ, ಕೀರ್ತಿ, ಹೊಗಳಿಕೆಗಳಂತೆ, ಗರಿಮೆ, ನಿಂದನೆಗಳೂ ಗುರಿಯಾದ ಈ 'ಲೆಜೆಂಡ್' ನದು ಸಾಧನಾ ಪೂರ್ಣವಾದ 'ಕ್ರಿಯೇಟೀವ್' ಜೀವನ. ಕೀರ್ತಿ ಎಂಬುದು ಈ ಬರಹಗಾರ್ತಿಯ ಜೀವನದ ಒಂದು ಅಂಗ. "If you would not be forgotten as soon as you are dead and rotten; Either write things worth reading or do worth writing" ಎಂಬ ಬೆಂಜಮಿನ್ ಫ್ರಾಂಕ್ಲಿನ್ ಮಾತಿಗೆ ಇಬ್ಬಗೆಯಲ್ಲೂ ಅರ್ಹತೆ ಪಡೆದಿರುವ, ತನ್ನ ಬರಹ, ಬದುಕಿನಿಂದ ಭಾರತೀಯ ಸಾಹಿತ್ಯ ರಂಗದಲ್ಲಿ ಉಜ್ವಲಮಣಿಯಾಗಿ ಬೆಳಗಿದ ಧೀಮಂತ ಸೃಜನಶೀಲ ಬರಹಗಾರ್ತಿ ಅಮೃತಾ ಪ್ರೀತಂ.




ಒಟ್ಟಾರೆಯಾಗಿ ಪಂಜಾಬ್ ಸಾಹಿತ್ಯದ ಮೊಟ್ಟಮೊದಲ ಆಧುನಿಕ ಲೇಖಕಿಯೆಂದು ಹೆಸರು ಪಡೆದ "ಅಮೃತಾ ಪ್ರೀತಂ" ತನ್ನ ವೈಯಕ್ತಿಕ ಜೀವನದ ವಿಫಲ ದಾಂಪತ್ಯವನ್ನು ಆಧರಿಸಿ ಕಥೆಗಳನ್ನು ಸೃಜಿಸಿದರು. ಆದರೆ ಆ ಕಥೆಗಳು ಎಂದೂ ಸ್ವಮರುಕದ, ಎಲ್ಲವನ್ನು ಅಬ್ಬರವಾಗಿ ಕೂಗಿ, ಚೀರಿಕೊಳ್ಳುವ ಗುಣಗಳನ್ನು ಹೊಂದಿರಲಿಲ್ಲ. ಬದಲಾಗಿ ಆ ಕಥೆಗಳಲ್ಲಿ ತಣ್ಣನೆಯ ನೋವಿತ್ತು. ಈ ನೋವು ಓದುಗರಲ್ಲಿ ವಿಷಾದ ಮೂಡಿಸುತ್ತಿತ್ತು. "ಅಮೃತಾ ಪ್ರೀತಂ" ತನ್ನ ಅನುಭವಗಳನ್ನು ಕಥೆಗಳ, ಕವನಗಳ ರೂಪದಲ್ಲಿ ಹೇಳುವಾಗ ಬಳಸುತ್ತಿದ್ದ ಅನೇಕ ರೂಪಗಳು ಸಂಕೀರ್ಣವಾಗಿದ್ದರೂ ತನ್ನ ಪ್ರಾಮಾಣಿಕತೆಯ ಕಾರಣದಿಂದಾಗಿಯೇ ಓದುಗರ ಪ್ರಜ್ಞೆಯನ್ನು ತಟ್ಟುತ್ತಿತ್ತು. ಹೀಗಾಗಿ ತನ್ನ ವೈಯಕ್ತಿಕ ಬದುಕಿನಿಂದ ಹೆಚ್ಚು ಗಮನವನ್ನು ಸೆಳೆದವರು ಇವರು. ಇಂದಿಗೂ ಸಹ ಸಾಹಿತ್ಯ ವಲಯದಲ್ಲಿ ಹೆಚ್ಚು ಚರ್ಚೆಗೆ ಒಳಗಾಗುತ್ತಿರುವವರು. ಬಹುಶಃ ಮುಂದಿನ ದಿನಗಳಲ್ಲಿಯೂ ಈಕೆಯ ಹೆಸರು ಸದಾ ಚರ್ಚೆಯಲ್ಲಿರುತ್ತದೆ. ❑

**ಬೆಂಬಲಿಗರೇ,**

**ಈ ಸಂಚಿಕೆಯನ್ನು ಹೊರತರುವಲ್ಲಿ ನಮ್ಮೊಟ್ಟಿಗೆ ಕೈಜೋಡಿಸಿರುವ ಸವಿತಾ ನಾಗಭೂಷಣ್ ಹಾಗೂ ಮಾನಸ ಬಳಗದವರಿಗೆ ಹಾಗೂ ಲೇಖನ, ಪತ್ರಗಳ ಮೂಲಕವೂ ನಮ್ಮ ಉತ್ಸಾಹವನ್ನು ಇಂಗದಂತೆ ನೋಡಿಕೊಳ್ಳುತ್ತಿರುವ ನಿಮ್ಮೆಲ್ಲರಿಗೂ ನಾವು ಸದಾ ಋಣಿ.**

# ಯಾವ ಅರ್ಹತೆ ಇದೆ ನಿನಗೆ?

ಯಾವ ಅರ್ಹತೆ ಇದೆ ನಿನಗೆ
ಮನುಷ್ಯಳೆಂದು ನೋಡದ ನನಗೆ
ಹತ್ತಿರವಿದ್ದೂ ದೂರಾದೆ, ದೂರಾಲೋಚನೆಯಿಂದ
ಮೌನಿಯಾದೆ ನಮ್ಮೊಡನೆ, ಹಿಂದೆ ನೂರೊಂದು ಮಾತನಾಡಲು

ಸ್ನೇಹದ ನೋಟವಿದ್ದಾಗ ವೈರಿಯ ನಡೆ ತೋರಿದೆ
ಮಲತಾಯಿ ಧೋರಣೆ ತಳೆದೆ, ದಾಷ್ಟ್ರ್ಯವನ್ನು ತೋರಿಸಿದೆ
ಕ್ಷಮಿಸುವ ಗುಣವಿದ್ದರೂ ಬಳಸಲಿಲ್ಲ ಕೊನೆಗೂ
ಯಾವ ಅರ್ಹತೆಯಿದೆ ನಿನಗೆ

ಸಿಮೋನ್ ದ ಬೋವಾ ಅಂದು ಹೇಳಿದ್ದಳು
ಹೆಣ್ಣು ರಚಿಸಲ್ಪಟ್ಟಿದ್ದಾಳೆಂದು, ಗಂಡು ರಚಿಸಿದ್ದಾನೆಂದು ತನಗೆ ಬೇಕಾದಂತೆ
ಇದನ್ನು ಓದಿದರೂ, ಬೋಧಿಸಿದರೂ, ಪದವಿ ಪಡೆದರೂ
ಅನ್ವಯಿಸಿಕೊಳ್ಳಲಿಲ್ಲ... ಗಂಡು ಹೆಣ್ಣುಗಳ ಮಧ್ಯೆ ನನ್ನನ್ನು ಬಂಧಿಸಿದೆ
ಗುಣಗಳ ಆರೋಪಿಸಿದೆ, ಯಾವ ಅರ್ಹತೆಯಿದೆ ನಿನಗೆ

ಸಬಲೀಕರಣವ ಮಾತನಾಡಿದೆ ಇದ್ದ ಬಲವನ್ನು ತೆಗೆದೆ
ಮಾತನಾಡಿದರೆ ಆರೋಪಿಸಿದೆ, ನೀನೆ ಪೂರ್ವಾಗ್ರಹ ಪೀಡಿತನಾದೆ
ಸರಿ ತಪ್ಪುಗಳ ಜ್ಞಾನವಿದ್ದರು ತಪ್ಪುಗಳನ್ನೆ ಮಾಡಿದೆ
ಸರಿ ಎಂಬ ಭ್ರಮೆಯಲ್ಲಿ, ಯಾವ ಅರ್ಹತೆಯಿದೆ ನಿನಗೆ

■ ಸರೋಜಾ ಸಂತಿ



Registered with Registrar of Newspapers of India under No. KARKAN/2007/22289
'NAMMA MANASA', REGD.No.: MAG(3) NPP/399(A)/2006-07 **Reg.KA/BGS/2074/2010-12**

# ತಲ್ಲಾಕಿನ ಕತ್ತಿಗಳು

ಅದು ಕೋಟೆಯಂತೆ ಕಟ್ಟಿದ ಗೋಡೆ
ದಪ್ಪ ದಪ್ಪ ಕಪ್ಪು ಕಲ್ಲಿನ ಕೋಟೆ
ಗೋಡೆಯಾಚೆಗೆ ಸ್ವಚ್ಛಂದ ಪಾರಿವಾಳ
ಗೋಡೆಗಳ ಮಧ್ಯ ನಾನು ಸಮಾಧಿ.

ಬದುಕು ಕಬ್ಬಿಣದ ಕಠಿಣ ಹಾದಿ
ಹಿಮಾಲಯದ ಹಿಮನೀರು ನಾನಾದರೆ
ಬಿಸಿನೀರ ಬುಗ್ಗೆಯಂತೆ ಕುದಿವ ನೀರವನು
ಕಿಲುಬುಗಟ್ಟಿದ ಸಂದು ಗೊಂದುಗಳಲ್ಲಿ
ನನಗಿಲ್ಲ ರಕ್ಷಣೆಯ ಭದ್ರ ಬುನಾದಿ.

ಮೂರು ಮಡದಿಯರಿಟ್ಟು
ನಾಲ್ಕನೆಯವಳ ಮೇಲೆ ಕಣ್ಣು ನೆಟ್ಟು
ಆಕಳಿಸಿ ಕಿಟಕಿಯಲ್ಲಿ ಇಣುಕಿದರೂ ಸಾಕು
ಭಯಗೊಂಡು ಚಿಟ್ಟನೆ ಕಿರುಚುತ್ತಾನೆ
"ಬೇಗಂ ನನ್ನ ಹುಕ್ಕಾ ಎಲ್ಲಿ?
ತಲೆ ಕೆಟ್ಟಿದೆಯಾ ಪರದೆ ಇಳಿ ಬಿಡು."
ಇಣುಕಿದೆಯಾ ಜೋಕೆ, ತಲ್ಲಾಕಿನ ಕತ್ತಿ
ತೂಗುತ್ತಿದೆ ನೆತ್ತಿ ಮೇಲೆ ಗೊತ್ತಿಲ್ಲವೆ?

ಚಂದ್ರನ ಹಾಲು ಬೆಳದಿಂಗಳಿಲ್ಲ
ವಸಂತನ ಆಗಮನದ ಸಂಭ್ರಮವಿಲ್ಲ
ನಿಷೇಧದ ಗೋಡೆಗಳ ಮಧ್ಯದಿಂದ
ನಿರಾಸೆಯ ಗೂಡಿನ ಬಂಧಿನಿ ಒಮ್ಮೆ
ಕೊಡವಿ ಕೇಳಿದಳು "ಹೆದರಿಸದಿರು ನನಗೆ
ತಲ್ಲಾಕಿನ ಕತ್ತಿಯನು" ತಿವಿದು.

ಪಹರೆ ಗೋಡೆಗಳ ಕಲ್ಲು ಶಿಥಿಲವಾಯ್ತು
ಸೋತ ನನ್ನ ಕೈಗಳಲ್ಲೀಗ ಶಕ್ತಿ ಸಂಚಾರವಾಯ್ತು
ಬಂಧನ ಕಳಚಿ ತಿರುಗಿ ನಿಂತು ಕೇಳಿತು.
ನಿನಗೆ ಜನ್ಮ ಕೊಟ್ಟ ತಾಯಿ ನಾನು
ಹೆದರಿಸದಿರು ತಲ್ಲಾಕಿನ ಕತ್ತಿಯಿಂದ
ನೀನವಳ ಮಡಿಲ ಕೂಸು ತಾನೇ.

■ ಡಾ. ಕೆ. ಷರೀಫಾ

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018